CPMG / KA / BG-GPO/13/2003-2005

ವಿಶ್ವಮಾನವ ವರ್ಷ



# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೩೯ | ಬೆಂಗಳೂರು, ಗುರುವಾರ, ಜೂನ್ ೩, ೨೦೦೪ (ಜೇಷ್ಠ ೧೩, ಶಕ ವರ್ಷ ೧೯೨೬) | ಸಂಚಿಕೆ ೨೩ |
|---|---|---|

## ಭಾಗ - ೫

## ಸರ್ಕಾರದ ಮತ್ತು ಖಾಸಗಿ ಜಾಹೀರಾತುಗಳು, ಲೋಕಸೇವಾ ಆಯೋಗದ ಜಾಹೀರಾತುಗಳು, ನೇಮಕಾತಿ ಸಮಿತಿಗಳ ಜಾಹೀರಾತುಗಳು.

**ಲೋಕೋಪಯೋಗಿ ಇಲಾಖೆ**

**ಕಾರ್ಯನಿರ್ವಾಹಕ ಇಂಜಿನೀಯರರ ಕಛೇರಿ, ಲೋಕೋಪಯೋಗಿ ಇಲಾಖೆ ವಿಭಾಗ, ಬಾಗಲಕೋಟ**

**ದ್ವಿಲಕೋಟೆ ಪದ್ಧತಿಯಲ್ಲಿ ಐಟಂವಾರು ಟೆಂಡರ್ ಅಧಿಸೂಚನೆ**

**ಕ್ರ.ಸಂ.ಲೋಇ:ಬಾವಿ:ಕಿಇಂ:ನಬಾರ್ಡ್9: ಅಧಿಸೂಚನೆ:2004-05:390 ದಿನಾಂಕ: 20ನೇ ಮೇ 2004,**

ಕರ್ನಾಟಕ ರಾಜ್ಯಪಾಲರ ಪರವಾಗಿ ಈ ಕೆಳಗೆ ಸಹಿ ಮಾಡಿದ ಅಧಿಕಾರಿಯವರಿಂದ, ಲೋಕೋಪಯೋಗಿ ಇಲಾಖೆಯಲ್ಲಿ ನೋಂದಣಿ ಮಾಡಿಸಿದ ಒಂದನೆಯ ದರ್ಜೆ ಗುತ್ತಿಗೆದಾರರಿಂದ ಕೆಳಗೆ ನಮೂದಿಸಿದ ಕಾಮಗಾರಿಗೆ ಐಟಂವಾರು ಟೆಂಡರ್‌ಗಳನ್ನು ಪ್ರಕಟಿಸಲಾಗಿದೆ. ಈ ಕಾಮಗಾರಿಗೆ ಎರಡು ಕವರ್‌ಗಳಲ್ಲಿ ಕೆಲಸದ ಹೆಸರನ್ನು ನಮೂದಿಸಿ, ಮೊಹರು ಬಂದ್ ಮಾಡಿದ ಟೆಂಡರ್‌ಗಳನ್ನು ಆಹ್ವಾನಿಸಲಾಗಿದೆ. ಟೆಂಡರ್‌ಗಳನ್ನು ಅನುಸೂಚಿತ ಅವಧಿ ಮತ್ತು ವೇಳೆಯಲ್ಲಿ ಸ್ವೀಕರಿಸಲಾಗುವುದು. ಅವುಗಳನ್ನು ಗುತ್ತಿಗೆದಾರರ ಅಥವಾ ಅವರ ಪ್ರತಿನಿಧಿಗಳ ಹಾಜರಾತಿಯಲ್ಲಿ ಅಂದೇ ಅಥವಾ ಮುಂದಿನ ಯಾವುದಾದರೂ ಕೆಲಸದ ಅವಧಿಯಲ್ಲಿ ತೆರೆಯಲಾಗುವುದು.

ಗುತ್ತಿಗೆದಾರರು ಟೆಂಡರ್‌ಗಳನ್ನು ಸಾಮಾನ್ಯ ನಿಯಮಗಳಲ್ಲಿ ಸೂಚಿಸಿದ ವಿವರಗಳನ್ನೊಳಗೊಂಡಿರುವಂತೆ "ಟೆಕ್ನಿಕಲ್ ಬಿಡ್"ನ್ನು ಒಂದು ಕವರಿನಲ್ಲಿ ಮತ್ತು "ಫೈನಾನ್ಸಿಯಲ್ ಬಿಡ್" ನ್ನು ಇನ್ನೊಂದು ಕವರಿನಲ್ಲಿ ಮೊಹರು ಬಂದ್ ಮಾಡಿದ "ಟೆಕ್ನಿಕಲ್ ಬಿಡ್ ಮತ್ತು ಫೈಯನಾನ್ಸಿಯಲ್ ಬಿಡ್ ಕವರ್‌ಗಳನ್ನು ಮೂರನೇ ಕವರಿನಲ್ಲಿ ಹಾಕಿ ಕೆಲಸದ ಹೆಸರನ್ನು ನಮೂದಿಸಿ ಮೊಹರು ಬಂದ್ ಮಾಡಿ ನಿಗದಿತ ಅವಧಿಯಲ್ಲಿ ಸಲ್ಲಿಸಬೇಕು.

**ಟೆಂಡರಿಗಿಟ್ಟ ಕಾಮಗಾರಿ ವಿವರಣಾ ಪಟ್ಟಿ**

| ಅ. ನಂ. | ಕಾಮಗಾರಿ ವಿವರ | ಟೆಂಡರಿಗಿಟ್ಟ ಅಂದಾಜು ಮೊತ್ತ ರೂ.ಲಕ್ಷಗಳಲ್ಲಿ | ಮುಂಗಡ ಠೇವಣಿ ಹಣ ರೂ.ಗಳಲ್ಲಿ | ಖಾಲಿ ಟೆಂಡರ್ ಫಾರ್ಮ್‌ಬೆಲೆ (ಹಿಂದಿರುಗಿಸುವುದಿಲ್ಲ) ರೂ.ಗಳಲ್ಲಿ | ಕಾಮಗಾರಿಯನ್ನು ಪೂರ್ತಿಗೊಳಿಸಲು ನಿಗದಿಪಡಿಸಿದ ಅವಧಿ (ಮಳೆಗಾಲ ಸಹಿತ) |
|---|---|---|---|---|---|
| 1 | 2 | 3 | 4 | 5 | 6 |
| 1 | ಬದಾಮಿ ತಾಲ್ಲೂಕಿನ ಬೇಲೂರ ಹೊಸೂರು ಗಿಡ್ಡನಾಯಕನಹಳ್ಳಿ ರಸ್ತೆ ಕಿಮೀ.0.00 ರಿಂದ 10.00 ರ ವರೆಗೆ ಸುಧಾರಣೆ ಮಾಡುವುದು. | 60.00 | 60000.00 | 5800.00 ಟ್ಯಾಕ್ಸ್ ಸಹಿತ | 9 ತಿಂಗಳು |
| 2 | ಜಮಖಂಡಿ ತಾಲ್ಲೂಕಿನ ಸಾವಳಗಿ ಹಿರೇ ಪಡಸಲಗಿ ರಸ್ತೆ ಸುಧಾರಣೆ ಮಾಡುವುದು (ಕಿಮೀ. 6.20) | 60.00 | 60000.00 | 5800.00 ಟ್ಯಾಕ್ಸ್ ಸಹಿತ | 9 ತಿಂಗಳು |
| 3 | ಮುಧೋಳ ತಾಲೂಕಿನ ಬರಗಿಯಿಂದ ಕಿಶೋರಿ ವರೆಗೆ ರಸ್ತೆ ಸುಧಾರಣೆ ಮಾಡುವುದು (ಕಿಮೀ.10.00) | 110.00 | 110000.00 | 5800.00 ಟ್ಯಾಕ್ಸ್ ಸಹಿತ | 12 ತಿಂಗಳು |

ಸಾಮಾನ್ಯ ನಿಯಮಗಳು:

1. ಈ ಕಾಮಗಾರಿಯನ್ನು ಅವಶ್ಯಕ ಹಾಟ್ ಮಿಕ್ಸ್ ಪ್ಲ್ಯಾಂಟ್, ಸ್ಪ್ರೇಯರ್, ಪೇವರ್ ರೋಡ್ ರೋಲರ್ ಮುಂತಾದ ಈ ಕೆಳಗೆ ನಮೂದಿಸಿದ ಮಶಿನರಿಗಳನ್ನು ಉಪಯೋಗಿಸಿ ಸ್ಪೆಸಿಫಿಕೇಶನ್ ಪ್ರಕಾರ ನಿರ್ವಹಿಸಬೇಕು ಹಾಗೂ ಅವುಗಳು ತಮ್ಮ ಸ್ವಂತ ಮಾಲೀಕತ್ವದಲ್ಲಿ ಇರುವದಾಗಲಿ ಅಥವಾ ಬಾಡಿಗೆಯ ಮೇಲೆ ತರುವ ಬಗ್ಗೆ ಸೂಕ್ತ ದಾಖಲೆಗಳನ್ನು ಟೆಕ್ನಿಕಲ್ ಬಿಡ್ ಜೊತೆಗೆ ಲಗತ್ತಿಸುವುದು.

| ಕ್ರಮ ಸಂಖ್ಯೆ | ಮಶೀನರಿಗಳು | ಸಂಖ್ಯೆ |
|---|---|---|
| 1 | ಹೆಚ್.ಎಂ.ಪಿ. 40/60 ಟಿಪಿಹೆಚ್ ಅಥವಾ ಹೆಚ್ಚಿನ ಸಾಮರ್ಥ್ಯವುಳ್ಳದ್ದು | 1 ನಂಬರ್ |
| 2 | ಮೆಕ್ಯಾನಿಲ್ ಪೇವರ್ ಫಿನಿಶರ್ | 1 ನಂಬರ್ |
| 3 | ಸ್ಟ್ಯಾಟಿಕ್ ರೋಡ್ ರೋಲರ್ | 2 ನಂಬರ್ |
| 4 | ಮೆಕ್ಯಾನಿಕಲ್ ಸ್ಪ್ರೇಯರ್ | 2 ನಂಬರ್ |
| 5 | ಟಿಪ್ಪರ್ಸ್ | 4 ನಂಬರ್ |

2. ಈ ಕಾಮಗಾರಿ ಮೊತ್ತದ ಶೇ. 30 ರಷ್ಟು ಮೊತ್ತಕ್ಕೆ ಕಡಿಮೆ ಇಲ್ಲದಂತೆ, ಇಂಥದೆ ಕಾಮಗಾರಿಯನ್ನು ಕಳೆದ ಐದು ವರ್ಷದ ಅವಧಿಯಲ್ಲಿ ಯಾವುದಾದರೂ ಒಂದು ಆರ್ಥಿಕ ವರ್ಷದಲ್ಲಿ ತೃಪ್ತಿಕರವಾಗಿ ಪೂರ್ತಿಗೊಳಿಸಿರಬೇಕು. (ಹಿಂದಿನ ವರ್ಷಗಳಲ್ಲಿ ನಿರ್ವಹಿಸಿದ ಕಾಮಗಾರಿಗಳಿಗೆ ಪ್ರತಿ ವರ್ಷ ಶೇಕಡಾ 10 ರಂತೆ ಕಂಪೌಂಡಿಂಗ್ ಹೆಚ್ಚುವರಿ ಪರಿಗಣಿಸಲಾಗುವುದು) ಅಲ್ಲದೆ ಪ್ರಸಕ್ತ ಆರ್ಥಿಕ ವರ್ಷದಲ್ಲಿ ಕಾಮಗಾರಿಯನ್ನು ಕೈಗೊಂಡಿದ್ದರೆ ಈ ಕಾಮಗಾರಿ ಮೊತ್ತದ ಶೇಕಡಾ 30 ರಷ್ಟು ಮೊತ್ತದ ಕಾಮಗಾರಿಯನ್ನು ನಿರ್ವಹಿಸಿರತಕ್ಕದ್ದು.
3. ಟೆಂಡರ್ ಜೊತೆಗೆ ಲಗತ್ತಿಸಿದ ಎಲ್ಲ ಪ್ರಮಾಣ ಪತ್ರಗಳನ್ನು ಪತ್ರಾಂಕಿತ ಅಧಿಕಾರಿ: ನೋಟರಿಯವರಿಂದ ನೋಟರಿ ಮುದ್ರೆಯೊಂದಿಗೆ ದೃಢೀಕರಿಸಿ ಸಲ್ಲಿಸತಕ್ಕದ್ದು. ಮೂಲ ಪ್ರಮಾಣ ಪತ್ರಗಳನ್ನು ಬೇಕೆಂದಾಗ್ಗೆ ಪರಿಶೀಲನೆಗೆ ಒದಗಿಸತಕ್ಕದ್ದು.
4. ಇಡಗಂಟು ಠೇವಣಿ ಮೊತ್ತವನ್ನು "ಕಾರ್ಯನಿರ್ವಾಹಕ ಅಭಿಯಂತರರ ಹೆಸರಿನಲ್ಲಿ ತೆಗೆಯಿಸಿದ ರಾಷ್ಟ್ರೀಕೃತ ಬ್ಯಾಂಕಿನಿಂದ ಕೊಡಮಾಡಿದ ಬ್ಯಾಂಕ್ ಗ್ಯಾರಂಟಿ: ಕಾಲ್ ಡಿಪಾಜಿಟ್: ಡಿಡಿ: ಕಾರ್ಯನಿರ್ವಾಹಕ ಇಂಜಿನೀಯರರ ಹೆಸರಿನಲ್ಲಿ ಪ್ಲೆಡ್ಜ್ ಮಾಡಿದ ರಾಷ್ಟ್ರೀಯ ಉಳಿತಾಯ ಪತ್ರಗಳು, ಈ ರೂಪದಲ್ಲಿ ಮಾತ್ರ ಸಲ್ಲಿಸತಕ್ಕದ್ದು.
5. ಗುತ್ತಿಗೆದಾರರು ದ್ವಿಲಕೋಟೆ ಪದ್ದತಿಯಂತೆ ಟೆಂಡರ್‌ಗಳನ್ನು ಎರಡು ಪ್ರತ್ಯೇಕ ಲಕೋಟೆಯಲ್ಲಿ ಸಲ್ಲಿಸತಕ್ಕದ್ದು. ಒಂದನೇಯ ಲಕೋಟೆಯಲ್ಲಿ ತಾಂತ್ರಿಕ ಅರ್ಹತೆ ನಿರ್ಧರಿಸುವ ಕೆಳಗಿನ ಮಾಹಿತಿಯನ್ನು ಪೂರೈಸತಕ್ಕದ್ದು.
   ಅ) ದೃಢೀಕೃತ ಕರ್ನಾಟಕ ಸರ್ಕಾರದ ಒಂದನೇ ದರ್ಜೆ ಗುತ್ತಿಗೆದಾರರ ನೋಂದಣಿ ಪತ್ರ
   ಆ) ದೃಢೀಕೃತ ಗುತ್ತಿಗೆದಾರರ ಅನುಭವ ಪತ್ರ
   ಇ) ಇಡಗಂಟು ಠೇವಣಿ ಹಣದ ಮೊತ್ತ

   ಎರಡನೆಯ ಲಕೋಟೆಯಲ್ಲಿ ಗುತ್ತಿಗೆದಾರರು ದರ ನಮೂದಿಸಿದ ಟೆಂಡರ್ ಪುಸ್ತಕಗಳನ್ನು (ಶೆಡ್ಯೂಲ್-ಬಿ) ದ್ವಿ ಪ್ರತಿಗಳಲ್ಲಿ ಪೂರೈಸತಕ್ಕದ್ದು.

   ಈ ಎರಡೂ ಲಕೋಟೆಯ ಮೇಲೆ ಕಾಮಗಾರಿಯ ಹೆಸರು, ಗುತ್ತಿಗೆದಾರರ ಹೆಸರು, ವಿಳಾಸ ಇತ್ಯಾದಿಗಳನ್ನು ನಮೂದಿಸತಕ್ಕದ್ದು.
6. ಮೊದಲನೆಯ ಲಕೋಟೆಯನ್ನು (ಟೆಕ್ನಿಕಲ್ ಬಿಡ್) ನಿರ್ಧಾರಿತ ದಿನಾಂಕದಂದು ತೆರೆದು ಗುತ್ತಿಗೆದಾರರ ಅರ್ಹತೆಯನ್ನು ನಿರ್ಧರಿಸಲಾಗುವುದು. ಅದರಂತೆ ಅರ್ಹತೆ ಪಡೆದ ಗುತ್ತಿಗೆದಾರರ ಎರಡನೆಯ ಲಕೋಟೆಯನ್ನು (ಫೈನಾನ್ಶಿಯಲ್ ಬಿಡ್) ತೆಗೆಯುವ ಬಗ್ಗೆ ತಿಳಿವಳಿಕೆ ಪತ್ರ ನೀಡಿ ತೆರೆಯಲಾಗುವುದು.
7. ಕೆಲಸಕ್ಕೆ ಬೇಕಾದ ಎಲ್ಲ ಸಾಮಗ್ರಿಗಳನ್ನು ಗುತ್ತಿಗೆದಾರರೆ ಪೂರೈಸಿ ನಿರ್ವಹಿಸಬೇಕು. ಇಲಾಖೆ ವತಿಯಿಂದ ಯಾವುದೇ ರೀತಿ ಸಾಮಗ್ರಿಗಳನ್ನು ಪೂರೈಸಲಾಗುವುದಿಲ್ಲ. ಗುತ್ತಿಗೆದಾರರು ಪೂರೈಸುವ ಸಾಮಗ್ರಿಗಳನ್ನು ಇಲಾಖೆಯು ಸೂಚಿಸಿದ ಪರೀಕ್ಷಣಾ ಕೇಂದ್ರದಲ್ಲಿ ತಮ್ಮ ಸ್ವಂತ ಖರ್ಚಿನಲ್ಲಿ ಪರೀಕ್ಷಿಸಿಕೊಂಡು ಸಂಬಂಧಪಟ್ಟ ಅಧಿಕಾರಿಗಳಿಗೆ ಪ್ರಮಾಣ ಪತ್ರವನ್ನು ಸಲ್ಲಿಸಿ ಅನುಮತಿ ಪಡೆದುಕೊಂಡು ಸಾಮಗ್ರಿಗಳನ್ನು ಕೆಲಸಕ್ಕೆ ಉಪಯೋಗಿಸಿಕೊಳ್ಳಬೇಕಾಗುತ್ತದೆ.
8. ಮೇಲೆ ನಮೂದಿಸಿದ ಕೆಲಸದ ಟೆಂಡರ್‌ಗಳಲ್ಲಿ ಭಾಗವಹಿಸಲಿಚ್ಚಿಸುವ ಗುತ್ತಿಗೆದಾರರು ನಿಗದಿತ ಟೆಂಡರ್ ಫಾರ್ಮ್ ಬೆಲೆಯನ್ನು ನಗದು ರೂಪದಲ್ಲಿ ಅಥವಾ ಡಿಮಾಂಡ್ ಡ್ರಾಫ್ಟನ್ನು "ಕಾರ್ಯನಿರ್ವಾಹಕ ಇಂಜಿನೀಯರರು ಲೋಕೋಪಯೋಗಿ ಇಲಾಖೆ ವಿಭಾಗ ಬಾಗಲಕೋಟ ಇವರ ಹೆಸರಿನಲ್ಲಿ ಬಾಗಲಕೋಟದಲ್ಲಿ" ಹಣ ಪಾವತಿಯಾಗುವಂತೆ ಡಿಡಿ. ಯನ್ನು ಈ ಕೆಳಗೆ ನಮೂದಿಸಿದ ದಿನಾಂಕದಂದು ಅರ್ಜಿಯೊಂದಿಗೆ ಸಲ್ಲಿಸಬೇಕು.
9. ಯಾವುದೇ ಅಥವಾ ಎಲ್ಲ ಟೆಂಡರ್‌ಗಳನ್ನು ಯಾವುದೇ ಕಾರಣವಿಲ್ಲದೆ ತಿರಸ್ಕರಿಸುವ ಹಕ್ಕನ್ನು, ಟೆಂಡರ್‌ಗಳನ್ನು ನಿರ್ಧರಿಸುವ ಅಧಿಕಾರಿಗಳು ಕಾಯ್ದಿರಿಸಿಕೊಂಡಿದ್ದಾರೆ.
10. ಗುತ್ತಿಗೆದಾರರು ಫೈಯನಾನ್ಶಿಯಲ್ ಬಿಡ್‌ನಲ್ಲಿ ಐಟಂವಾರು ದರಗಳನ್ನು ಅಂಕಿಯಲ್ಲಿ ಮತ್ತು ಅಕ್ಷರದಲ್ಲಿ ತಪ್ಪದೇ ನಮೂದಿಸಬೇಕು ಮತ್ತು ಮೊಹರು ಮಾಡಿ ಸಲ್ಲಿಸಬೇಕು.
11. ಟೆಂಡರ್ ಅವಧಿಯ ಅನುಸೂಚಿ ಈ ಕೆಳಗಿನಂತಿದೆ.

| | | |
|---|---|---|
| ಅ) | ಅರ್ಜಿಸಲ್ಲಿಸಲು ಕೊನೆಯ ದಿನಾಂಕ | 14.6.2004 ಅಥವಾ ಅದಕ್ಕಿಂತ ಮೊದಲು ಕಛೇರಿ ವೇಳೆಯಲ್ಲಿ ಮಾತ್ರ |
| ಬ) | ಖಿಲ್ಲಾ ಟೆಂಡರ್ ಫಾರ್ಮ್‌ಗಳನ್ನು ಪೂರೈಸುವ ದಿನಾಂಕ | 18.6.2004 ರಂದು ಕಛೇರಿ ವೇಳೆಯಲ್ಲಿ ಮಾತ್ರ |

ಕ) ಟೆಕ್ನಿಕಲ್ ಬಿಡ್ ಮತ್ತು ಫೈನಾನ್ಸಿಯಲ್ ಬಿಡ್‌ಗಳನ್ನು ಸಲ್ಲಿಸುವ ದಿನಾಂಕ 22.6.2004 ರಂದು ಮಧ್ಯಾಹ್ನ 4.00 ಘಂಟೆಯವರೆಗೆ ಮಾತ್ರ

ಡ) ಟೆಕ್ನಿಕಲ್ ಬಿಡ್‌ನ್ನು ತೆರೆಯುವ ದಿನಾಂಕ 23.6.2004 ರಂದು ಸಾಯಂಕಾಲ 4.30 ಕ್ಕೆ ತೆರೆಯಲಾಗುವುದು.

ಪೂರ್ವ ಅರ್ಹತಾ (ಟೆಕ್ನಿಕಲ್ ಬಿಡ್) ಪಟ್ಟಿಯಲ್ಲಿ ಒಪ್ಪಿಗೆಯಾದ ಗುತ್ತಿಗೆದಾರರ ಫೈಯನಾನ್ಸಿಯಲ್ ಬಿಡ್‌ನ್ನು ಮಾತ್ರ ತೆರೆಯಲಾಗುವ ದಿನಾಂಕವನ್ನು ಮುಂದೆ ತಿಳಿಸಲಾಗುವುದು.

**ಟಿಪ್ಪಣಿ :** 1. ಮೇಲೆ ನಮೂದಿಸಿದ ದಿನಾಂಕಗಳು ಸಾರ್ವತ್ರಿಕ ರಜಾ ದಿವಸ ಎಂದು ಘೋಷಿಸಿದಲ್ಲಿ ಮುಂದಿನ ಕೆಲಸದ ದಿವಸವನ್ನು ಪರಿಗಣಿಸಲಾಗುವುದು.

2. ಹೆಚ್ಚಿನ ಮಾಹಿತಿಯನ್ನು ಬೇಕಾದಲ್ಲಿ ಈ ಕೆಳಗೆ ಸಹಿ ಮಾಡಿದ ಅಧಿಕಾರಿಗಳ ಕಛೇರಿಯಿಂದ ಕೆಲಸದ ವೇಳೆಯಲ್ಲಿ ಸಂಪರ್ಕಿಸಿ ಪಡೆಯಬಹುದು.

**ಡಿ. ಎನ್. ಮರೋಳ**

ಕಾರ್ಯನಿರ್ವಾಹಕ ಇಂಜಿನಿಯರರು,

ಪಿಆರ್.232 (ಲೋಇ) ಬಾಗಲಕೋಟ ವಿಭಾಗ, ಬಾಗಲಕೋಟ.

## ಕರ್ನಾಟಕ ರಾಜ್ಯ ಪತ್ರಾಗಾರ ಇಲಾಖೆ

**ನಿರ್ದೇಶಕರ ಕಛೇರಿ, ಕರ್ನಾಟಕ ರಾಜ್ಯ ಪತ್ರಾಗಾರ, ಕೊಠಡಿ ಸಂ:11, ನೆಲಮಹಡಿ, ವಿಧಾನಸೌಧ ಬೆಂಗಳೂರು**

**ಅಧಿಸೂಚನೆ**

**ಸಂ:ಎಆರ್‌ಎಸ್ 58 ಇಎಸ್‌ಟಿ 03 ಬೆಂಗಳೂರು ದಿನಾಂಕ: 26ನೇ ಮೇ 2004**

**ವಿಷಯ :** ಕರ್ನಾಟಕ ರಾಜ್ಯ ಪತ್ರಾಗಾರ ಇಲಾಖೆಯಲ್ಲಿ ಖಾಲಿ ಇರುವ ಶೀಘ್ರಲಿಪಿಗಾರರ ಬ್ಯಾಕ್‌ಲಾಗ್ ಹುದ್ದೆಯನ್ನು (ಪರಿಶಿಷ್ಠ ಪಂಗಡಕ್ಕೆ ಮೀಸಲಾತಿ) ಭರ್ತಿ ಮಾಡಲು ಅರ್ಜಿಗಳನ್ನು ಆಹ್ವಾನಿಸುವ ಬಗ್ಗೆ.

**ಉಲ್ಲೇಖ :** 1. ಸರ್ಕಾರದ ಅಧಿಸೂಚನೆ ಸಂ:ಡಿಪಿಎಆರ್ 13 ಎಸ್‌ಟಿಸಿ 2001, ದಿನಾಂಕ: 21.11.2001.

2. ಸರ್ಕಾರಿ ಪತ್ರದ ಸಂ:ಸಂಕಇ 19 ರಾಪಸಿ: 02 (ಭಾಗ) ದಿನಾಂಕ: 22.03.2004.

1) ಕರ್ನಾಟಕ ರಾಜ್ಯ ಪತ್ರಾಗಾರ ಇಲಾಖೆಯಲ್ಲಿ ಈ ಕೆಳಕಂಡ ಬ್ಯಾಕ್‌ಲಾಗ್ ಹುದ್ದೆಯನ್ನು (ಪರಿಶಿಷ್ಠ ಪಂಗಡ) ಉಲ್ಲೇಖ (1)ರಲ್ಲಿನ ಸರ್ಕಾರಿ ಅಧಿಸೂಚನೆಗೆ ಒಳಪಟ್ಟ ಹಾಗೂ ಉಲ್ಲೇಖ (2)ರಲ್ಲಿನ ಸರ್ಕಾರಿ ಪತ್ರದನ್ವಯ ಭರ್ತಿ ಮಾಡಲು ಅರ್ಹ ಅಭ್ಯರ್ಥಿಗಳಿಂದ ಅರ್ಜಿಗಳನ್ನು ಆಹ್ವಾನಿಸಲಾಗಿದೆ. ಅರ್ಜಿಗಳನ್ನು ದ್ವಿಪ್ರತಿಯಲ್ಲಿ ನಮೂನೆ ಭಾಗ-1 ರಲ್ಲಿ ಭರ್ತಿ ಮಾಡಿ ಸಲ್ಲಿಸಬೇಕು. ಅರ್ಜಿ ನಮೂನೆಯನ್ನು ಸರ್ಕಾರಿ ಪುಸ್ತಕ ಮಳಿಗೆಯಿಂದಾಗಲೀ ಅಥವಾ ಸರ್ಕಾರದಿಂದ ಮನ್ನಣೆ ಪಡೆದ ಪುಸ್ತಕ ಅಂಗಡಿಗಳಿಂದಾಗಲೀ ನಿಗದಿತ ಶುಲ್ಕ ಪಾವತಿ ಮಾಡಿ ಪಡೆಯಬಹುದಾಗಿದೆ.

| ಕ್ರಮ ಸಂಖ್ಯೆ | ಹುದ್ದೆಯ ಹೆಸರು | ವೇತನ ಶ್ರೇಣಿ | ಮೀಸಲಾತಿ ವರ್ಗ | ಹುದ್ದೆಯ ಸಂಖ್ಯೆ |
|---|---|---|---|---|
| 1. | ಶೀಘ್ರಲಿಪಿಗಾರರು | ರೂ.3850-7050 | ಪರಿಶಿಷ್ಠ ಪಂಗಡ | 1 |

2. **ಕನಿಷ್ಠ ವಿದ್ಯಾರ್ಹತೆ:** ಎಸ್.ಎಸ್.ಎಲ್.ಸಿ ಮತ್ತು ಕನ್ನಡ ಪ್ರೌಢ ದರ್ಜೆ ಬೆರಳಚ್ಚು ಹಾಗೂ ಶೀಘ್ರಲಿಪಿಯಲ್ಲಿ ಉತ್ತೀರ್ಣರಾಗಿರಬೇಕು.
3. **ವಯೋಮಿತಿ:** ಅಭ್ಯರ್ಥಿಯು ಅರ್ಜಿಸಲ್ಲಿಸುವ ದಿನದಂದು 18 ವರ್ಷಗಳಿಗೆ ಮೀರಿರಬೇಕು ಮತ್ತು ಅರ್ಜಿಸಲ್ಲಿಸಲು ನಿಗದಿಪಡಿಸಿದ ಕೊನೆಯ ದಿನಾಂಕಕ್ಕೆ ಅಭ್ಯರ್ಥಿಯ ವಯಸ್ಸು 40 ವರ್ಷಗಳು ಮೀರಿರಬಾರದು.
4. **ಆಯ್ಕೆ ವಿಧಾನ:** ಕರ್ನಾಟಕ ಸಿವಿಲ್ ಸೇವೆಗಳು (ಪರಿಶಿಷ್ಠ ಜಾತಿ ಮತ್ತು ಪರಿಶಿಷ್ಠ ಪಂಗಡದ ಅಭ್ಯರ್ಥಿಗಳಿಗೆ ಮೀಸಲಾಗಿರುವ ಖಾಲಿ ಹುದ್ದೆಗಳು) (ವಿಶೇಷ ನೇಮಕಾತಿ) ನಿಯಮಗಳು 2001 ಮತ್ತು ಅದಕ್ಕೆ ಕಾಲಕಾಲಕ್ಕೆ ಮಾಡಿರುವ ತಿದ್ದುಪಡಿಗಳ ಅನ್ವಯ ಆಯ್ಕೆ ಪಟ್ಟಿಯನ್ನು ತಯಾರಿಸಲಾಗುವುದು.
5. **ವಿಶೇಷ ಸೂಚನೆಗಳು:**
   1. ಅಭ್ಯರ್ಥಿಯು ಅರ್ಜಿಯನ್ನು ಸಲ್ಲಿಸುವಾಗ ಅರ್ಜಿಯೊಂದಿಗಿರುವ ಸೂಚನೆಗಳನ್ನು ಗಮನಿಸುವುದು. ಅರ್ಜಿ ನಮೂನೆಯನ್ನು ಸಲ್ಲಿಸುವಾಗ ಅದರೊಂದಿಗಿರುವ ಈ ಕೆಳಕಂಡ ಪ್ರಮಾಣ ಪತ್ರಗಳ ಜೆರಾಕ್ಸ್ ಪ್ರತಿಗಳನ್ನು ದ್ವಿಪ್ರತಿಯಲ್ಲಿ ಸ್ವಯಂ ದೃಢೀಕೃತ ಪ್ರತಿಗಳೊಂದಿಗೆ ಸಲ್ಲಿಸಬೇಕು.
      - ಅ. ವಿದ್ಯಾರ್ಹತೆಯ ಶೈಕ್ಷಣಿಕ ಪ್ರಮಾಣ ಪತ್ರಗಳು.
      - ಆ. ಜನ್ಮ ದಿನಾಂಕದ ಬಗ್ಗೆ ದೃಢೀಕರಿಸಿರುವ ಪ್ರಮಾಣ ಪತ್ರಗಳು.
      - ಇ. ಅಭ್ಯರ್ಥಿಯು ಕಲಿತ ಶಾಲೆಯ ಮುಖ್ಯಸ್ಥರು ಕೊಟ್ಟಿರುವ ನಡತೆಯ ಬಗ್ಗೆ ಪ್ರಮಾಣ ಪತ್ರಗಳು.
   2. ಪರಿಶಿಷ್ಠ ಪಂಗಡದ ಅಭ್ಯರ್ಥಿಗಳು ಸರ್ಕಾರದ ಆದೇಶ ಸಂಖ್ಯೆ: ಎಸ್‌ಡಬ್ಲ್ಯೂಎಲ್ 213 ಎಸ್‌ಎಡಿ 85, ದಿನಾಂಕ: 23.3.1987 ರಂತೆ ಪರಿಶಿಷ್ಠ ಪಂಗಡದ ಪ್ರಪತ್ರವನ್ನು ಲಗತ್ತಿಸಬೇಕು.
   3. ಅಭ್ಯರ್ಥಿಯು ತನ್ನ ಇತ್ತೀಚಿನ ಎರಡು ಭಾವ ಚಿತ್ರಗಳನ್ನು ಲಗತ್ತಿಸಬೇಕು.
   4. ಪ್ರಮಾಣ ಪತ್ರಗಳನ್ನು ಲಗತ್ತಿಸಿರುವ ಅರ್ಜಿಗಳನ್ನು ತಿರಸ್ಕರಿಸಲಾಗುವುದು.
   5. ಅರ್ಜಿ ಸಲ್ಲಿಸುವ ಅಭ್ಯರ್ಥಿಗಳು ಲಕೋಟೆಯ ಮೇಲೆ **"ಶೀಘ್ರಲಿಪಿಗಾರರ ಹುದ್ದೆಗೆ ಅರ್ಜಿ"** ಎಂದು ಸ್ಪಷ್ಟ ಅಕ್ಷರಗಳಲ್ಲಿ ನಮೂದಿಸತಕ್ಕದ್ದು.
   6. ಅರ್ಜಿದಾರರೊಡನೆ ಯಾವುದೇ ಪತ್ರ ವ್ಯವಹಾರಕ್ಕೆ ಅವಕಾಶವಿರುವುದಿಲ್ಲ.

7. ಈಗಾಗಲೇ ಕೆಲಸ ಮಾಡುತ್ತಿರುವ ಅಭ್ಯರ್ಥಿಗಳು ಅರ್ಜಿ ಸಲ್ಲಿಸುವ ಮೊದಲು ತಮ್ಮ ಇಲಾಖಾ ಮುಖ್ಯಸ್ಥರಿಂದ ಅನುಮತಿ ಪಡೆದು ಮತ್ತು ಕಛೇರಿ ಮೂಲಕ ಅರ್ಜಿಗಳನ್ನು ನಿಗದಿತ ಅವಧಿಯಲ್ಲಿ ಕಳುಹಿಸಬೇಕು.
8. ರಿಕ್ತ ಸ್ಥಾನಗಳು ಬದಲಾವಣೆಗೊಳಪಟ್ಟಿರುತ್ತವೆ.
6. ನಿಗದಿಪಡಿಸಲಾದ ಅರ್ಜಿಯನ್ನು ಭರ್ತಿ ಮಾಡಿ ಸೂಕ್ತ ಪ್ರಮಾಣ ಪತ್ರಗಳ ಪ್ರತಿಗಳನ್ನು ಸ್ವಯಂ ದೃಢೀಕರಿಸಿ ಈ ಕೆಳಗಿನ ವಿಳಾಸಕ್ಕೆ ರವಾನಿಸತಕ್ಕದ್ದು.

ನಿರ್ದೇಶಕರು,
ಕರ್ನಾಟಕ ರಾಜ್ಯ ಪತ್ರಾಗಾರ ಇಲಾಖೆ,
ಕೊಠಡಿ ಸಂಖ್ಯೆ: 9, ನೆಲಮಹಡಿ,
ವಿಧಾನ ಸೌಧ, ಬೆಂಗಳೂರು-560001.

7. ಅರ್ಜಿ ಸ್ವೀಕರಿಸುವ ಕೊನೆಯ ದಿನಾಂಕ: 31.08.2004

ಭೀ. ಶ್ರೀಧರ
ನಿರ್ದೇಶಕರು,
ಕರ್ನಾಟಕ ರಾಜ್ಯ ಪತ್ರಾಗಾರ ಇಲಾಖೆ.

ಪಿ.ಆರ್.235

## ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ಕೋಲಾರ ಅರಣ್ಯ ವಿಭಾಗ, ಕೋಲಾರ

## ಟೆಂಡರ್-ಕಂ-ಹರಾಜು ಪ್ರಕಟಣೆ

### ಸಂಖ್ಯೆ:ಎ7:ಎಸ್ಎಎಸ್:ಸಿಆರ್:66/03-04 ದಿನಾಂಕ: 22ನೇ ಮೇ 2004

ಈ ಮೂಲಕ ಸಾರ್ವಜನಿಕರಿಗೆ ತಿಳಿಯಪಡಿಸುವುದೇನೆಂದರೆ, ಕೋಲಾರ ಅರಣ್ಯ ವಿಭಾಗದ ಶ್ರೀನಿವಾಸಪುರ ವಲಯ ನೀಲಗಿರಿ ನೆಡುತೋಪಿನಲ್ಲಿ ಕತ್ತಾವಣೆ ಮಾಡಿ ತಯಾರಿಸಿದ ಟಿಂಬರ್‌ನ್ನು ಉಪ ಅರಣ್ಯ ಸಂರಕ್ಷಣಾಧಿಕಾರಿಗಳು ಅಥವಾ ಅವರಿಂದ ನಿಯೋಜಿಸಲ್ಪಟ್ಟ ಅಧಿಕಾರಿಗಳು ವಲಯ ಅರಣ್ಯಾಧಿಕಾರಿಗಳ ಕಛೇರಿಯಲ್ಲಿ ದಿನಾಂಕ: 24.6.2004 ರಂದು 1.00 ಗಂಟೆಗೆ ಟೆಂಡರ್-ಕಂ-ಹರಾಜು ಮಾಡಲಾಗುವುದು. ಹೆಚ್ಚಿನ ವಿವರಗಳಿಗೆ ಈ ಕಛೇರಿಯ ವೇಳೆಯಲ್ಲಿ ಸಂಪರ್ಕಿಸತಕ್ಕದ್ದು.

**ಹರಾಜಿನಲ್ಲಿಟ್ಟಿರುವ ಮರಗಳ ವಿವರಗಳು**

| ಕ್ರ.ಸಂ. | ತಾಲ್ಲೂಕು |
|---|---|
| 1. | ಶ್ರೀನಿವಾಸಪುರ ವಲಯದಲ್ಲಿ ದಾಸ್ತಾನು ಮಾಡಿರುವ 262.103 ಘನ ಮೀಟರ್ ನೀಲಗಿರಿ ಟಿಂಬರ್ |

**ಷರತ್ತುಗಳು:**

1. ಟೆಂಡರ್ ಫಾರಂಗಳನ್ನು ದಿನಾಂಕ: 22.6.2004 ಮತ್ತು 23.6.2004 ರಂದು ಕೆಲಸದ ವೇಳೆಯಲ್ಲಿ ಕೊಡಲಾಗುವುದು. ಒಂದು ಟೆಂಡರ್ ಫಾರಂ ಬೆಲೆ ರೂ. 200-00 ಮತ್ತು ತೆರಿಗೆಗಳು ಒಟ್ಟು ರೂ.216-00.
2. ಭರ್ತಿ ಮಾಡಿದ ಟೆಂಡರ್ ಫಾರಂಗಳನ್ನು ದಿನಾಂಕ: 24.6.2004 ರಂದು ಮಧ್ಯಾಹ್ನ 12.00 ಗಂಟೆಯೊಳಗೆ ಮೊಹರಾದ ಪೆಟ್ಟಿಗೆಯಲ್ಲಿ 5000-00 ರೂ.ಗಳ ಡಿ.ಡಿ.ಯನ್ನು ಉಪ ಅರಣ್ಯ ಸಂರಕ್ಷಣಾಧಿಕಾರಿಗಳವರ ಹೆಸರಿನಲ್ಲಿ ಪಡೆದು ಲಗತ್ತಿಸಿ ಹಾಕಬೇಕು. ಅದೇ ದಿನ 3.00 ಗಂಟೆಗೆ ಹರಾಜು ಮುಗಿದ ನಂತರ ತೆಗೆಯಲಾಗುವುದು. ಬಿಡ್ ಮಾಡಲು ಇಷ್ಟವುಳ್ಳವರು ಹರಾಜು ಪ್ರಾರಂಭವಾಗುವ ಮೊದಲು ಪ್ರತಿಯೊಬ್ಬರೂ ರೂ. 5000-00 ಠೇವಣಿ ಪಾವತಿಸಬೇಕು.
3. ಮೊಹರಾದ ಟೆಂಡರ್ ನಮೂನೆಗಳನ್ನು ದಿನಾಂಕ: 24.6.2004 ರಂದು 12.00 ಗಂಟೆಯವರೆಗೆ ಸಲ್ಲಿಸಬಹುದಾಗಿದೆ.
4. ಹರಾಜು ಮುಗಿದ ಕೂಡಲೇ ಮಾರಾಟ ಬೆಲೆಯ ಶೇಕಡಾ 50% ರಷ್ಟು ಹಣ ಮತ್ತು ಪೂರ್ತಿ ತೆರಿಗೆಗಳನ್ನು ಹರಾಜು ನಡೆದ ಸ್ಥಳದಲ್ಲಿಯೇ ಪಾವತಿಸಿ ರಸೀದಿ ಪಡೆಯತಕ್ಕದ್ದು, ಉಳಿಕೆ ಶೇ. 50% ರಷ್ಟು ಹಣವನ್ನು ಮಾರಾಟ ದೃಢೀಕರಿಸಿದ ಮೇಲೆ ಪಾವತಿಸಿ ಕೆಲಸದ ಆದೇಶ ಪಡೆಯುವುದು.
5. ಹರಾಜನ್ನು ಅನುಮೋದಿಸುವ ಅಥವಾ ತಿರಸ್ಕರಿಸುವ ಹಕ್ಕು ಅರಣ್ಯ ಇಲಾಖೆ ಪ್ರಾಧಿಕಾರವುಳ್ಳ ಅಧಿಕಾರಿಗಳವರ ವ್ಯಾಪ್ತಿಯಲ್ಲಿರುತ್ತದೆ.
6. ಹರಾಜು ಅಂಗೀಕಾರವಾದ 60 ದಿನಗಳಲ್ಲಿ ಟಿಂಬರನ್ನು ಸಾಗಿಸಿಕೊಳ್ಳತಕ್ಕದ್ದು, ತಪ್ಪಿದ್ದಲ್ಲಿ ನಷ್ಟಗಳಿಗೆ ಸವಾಲುದಾರರು ಜವಾಬ್ದಾರರಾಗಿರುತ್ತಾರೆ.
7. ಟಿಂಬರನ್ನು ಸೂಕ್ತ ರಹದಾರಿಯೊಂದಿಗೆ ಸಾಗಾಣಿಕೆ ಮಾಡಿಕೊಳ್ಳತಕ್ಕದ್ದು.
8. ನಿಗದಿತ ವೇಳೆಯಲ್ಲಿ ಹಣ ಪಾವತಿಸದಿದ್ದಲ್ಲಿ, ಮೊದಲು ಪಾವತಿಸಿರುವ ಹಣವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಸವಾಲುದಾರರ ಜವಾಬ್ದಾರಿಯ ಮೇಲೆ ಮರು ಹರಾಜು ಮಾಡಲಾಗುವುದು. ಇದರಿಂದ ಸರ್ಕಾರಕ್ಕೆ ಆಗುವ ನಷ್ಟವನ್ನು ಕಾನೂನು ರೀತ್ಯಾ ಬಾಕಿ ಕಂದಾಯವಾಗಿ ವಸೂಲಿ ಮಾಡಲಾಗುವುದು.
9. ಹರಾಜಿನಲ್ಲಿ ಭಾಗವಹಿಸುವ ಮೊದಲೇ ಬಿಡ್‌ದಾರರು ಸೊತ್ತುಗಳನ್ನು ಖುದ್ದಾಗಿ ಪರಿಶೀಲಿಸಿರಬೇಕು.
10. ಹರಾಜು ಮಾಡುವ ಟಿಂಬರ್ ವಿವರಗಳನ್ನು ಸಂಬಂಧಪಟ್ಟ ವಲಯ ಅರಣ್ಯಾಧಿಕಾರಿಯವರಿಂದ ಪಡೆದುಕೊಳ್ಳಬಹುದು.

11. ಹರಾಜಿಗಾಗಿ ಪ್ರಕಟಣೆಗೊಂಡಿರುವ ಮರಗಳ ಸಂಖ್ಯೆಯಾಗಲೀ ಅಥವಾ ಪರಿಮಾಣದಲ್ಲಾಗಲೀ ವ್ಯತ್ಯಾಸ ಕಂಡು ಬಂದ ಪಕ್ಷದಲ್ಲಿ ಈ ಇಲಾಖೆ ಜವಾಬ್ದಾರಿಯಿರುವುದಿಲ್ಲ. ಆದ್ದರಿಂದ ಬಿಡ್‌ದಾರರು ಹರಾಜಿನಲ್ಲಿಟ್ಟಿರುವ ಉತ್ಪನ್ನವನ್ನು ಹರಾಜಿಗೆ ಮುಂಚಿತವಾಗಿ ಪರೀಕ್ಷಿಸಿ ಖಾತ್ರಿ ಮಾಡಿಕೊಂಡು ಹರಾಜಿನಲ್ಲಿ ಭಾಗವಹಿಸತಕ್ಕದ್ದು, ಸೊತ್ತುಗಳು ಹೇಗಿದೆಯೋ ಹಾಗೆ ಅದೇ ಸ್ಥಿತಿಯಲ್ಲಿ ಮಾರಾಟ ಮಾಡಲಾಗುವುದು.

12. ಹರಾಜಿನ ಮೊತ್ತಕ್ಕೆ ಶೇ. 12% ರಷ್ಟು, ಅರಣ್ಯ ಅಭಿವೃದ್ಧಿ ತೆರಿಗೆ ಶೇ. 13% ಮಾರಾಟ ತೆರಿಗೆ ಆದಾಯ ತೆರಿಗೆ 15% ಆದಾಯ ತೆರಿಗೆಯ ಮೇಲೆ 5% ಸರ್‌ಚಾರ್ಜ್

13. ಬ್ಲಾಕ್‌ಲೀಸ್ಟ್ ಆಗಿರುವವರು ಇನ್‌ಸಾಲ್ವೆಂಟ್ಸ್, ಮತ್ತು ಸುಸ್ತಿದಾರರು ಟೆಂಡರ್ ಅಥವಾ ಬಿಡ್‌ನಲ್ಲಿ ಭಾಗವಹಿಸಲು ಅರ್ಹರಲ್ಲ.

14. ಹರಾಜು ಮಾಡುವ ಅಥವಾ ಮಂಜೂರು ಮಾಡುವ ಪ್ರಾಧಿಕಾರವು ಹೆಚ್ಚಿನ ಬಿಡ್‌ನ್ನು ಅಂಗೀಕರಿಸುವ ಮತ್ತು ತಿರಸ್ಕರಿಸುವ ಅಥವಾ ಎರಡನೇ ಹೆಚ್ಚುವರಿ ಬಿಡ್‌ನ್ನು ಅಂಗೀಕರಿಸುವ ಅಥವಾ ಪುನರ್ ಮಾರಾಟ ಮಾಡುವ ಹಕ್ಕನ್ನು ಹೊಂದಿರುತ್ತಾರೆ.

15. ಹೆಚ್ಚಿನ ವಿವರಗಳನ್ನು ಈ ಕೆಳಗೆ ಸಹಿ ಮಾಡಿರುವವರ ಕಛೇರಿಯಲ್ಲಿ ಕೆಲಸದ ವೇಳೆಯಲ್ಲಿ ಪಡೆಯಬಹುದಾಗಿದೆ.

ಉಪ ಅರಣ್ಯ ಸಂರಕ್ಷಣಾಧಿಕಾರಿಗಳು,
ಕೋಲಾರ ವಿಭಾಗ, ಕೋಲಾರ.

ಪಿ.ಆರ್.236

**ಉಪ ಅರಣ್ಯ ಸಂರಕ್ಷಣಾಧಿಕಾರಿಯವರ ಕಛೇರಿ, ಸಾಗರ ವಿಭಾಗ, ಸಾಗರ**

**ಕಿರು ಅರಣ್ಯ ಉತ್ಪನ್ನ ಮತ್ತು ಹಾಲುಮಡ್ಡಿಯ ಟೆಂಡರ್ ಕಂ ಹರಾಜು ಮಾರಾಟ ಸಂಕ್ಷಿಪ್ತ ಪ್ರಕಟಣೆ**

**ಕ್ರಮಾಂಕ ಎ4 ಎಸ್‌ಯುಪಿ: ಎಂಎಫ್‌ಪಿ:ಸಿಆರ್:1:2004-05 ದಿನಾಂಕ: 25ನೇ ಮೇ 2004**

ಈ ಮೂಲಕ ಸಾರ್ವಜನಿಕರ ಅವಗಾಹನೆಗೆ ತಿಳಿಯಪಡಿಸುವುದೇನೆಂದರೆ ದಿನಾಂಕ: 1.7.2004 ರಿಂದ 30.6.2006ರ ವರೆಗೆ ಎರಡು ವರ್ಷಗಳ ಅವಧಿಗೆ ಸಾಗರ ವಿಭಾಗದ ಈ ಕೆಳಕಂಡ ವಲಯಗಳಲ್ಲಿನ ಮೀಸಲು ಅರಣ್ಯಗಳು ಮತ್ತು ಸಣ್ಣ ಕಾಡುಗಳು ಎಲ್ಲಾ ಸಣ್ಣ ಮತ್ತು ದೊಡ್ಡ ಕೆರೆ ದಂಡೆಗಳು ಅರಣ್ಯ ಇಲಾಖೆಯ ಆಡಳಿತಕ್ಕೆ ಒಳಪಟ್ಟಿರುವ ಎಲ್ಲಾ ರಸ್ತೆಯ ಕಾಡುಗಳು ಕಾಯ್ದಿಟ್ಟ ಅರಣ್ಯ ಸಣ್ಣ ಕಾಡು ಜಿಲ್ಲಾ ಕಾಡು (ಆಯಾ ವಲಯಗಳ ವ್ಯಾಪ್ತಿಗೆ ಒಳಪಟ್ಟಂತೆ ಮಾತ್ರ) ಮುಕ್ತ ಸರ್ಕಾರಿ ಜಮೀನು (ಮುಫತ್ ಮತ್ತು ಜಾಡಿ) ಕಾಡುಗಳಿಂದ ಈ ಕೆಳಗೆ ಸೂಚಿಸಿರುವ ತಪಶೀಲಿನಂತೆ ಗುತ್ತಿಗೆಯನ್ನು ಉಪ ಅರಣ್ಯ ಸಂರಕ್ಷಣಾಧಿಕಾರಿಗಳು ಸಾಗರ ಅಥವಾ ಅವರಿಂದ ನಿಯೋಜಿತ ರಾದವರಿಂದ ಟೆಂಡರ್ ಕಂ ಹರಾಜು ಮೂಲಕ ವಿಕ್ರಯಿಸಲ್ಪಡುತ್ತದೆ. ಸದರಿ ಟೆಂಡರ್ ಕಂ ಹರಾಜಿನಲ್ಲಿ ಇಲಾಖೆಯಿಂದ ತಪ್ಪಿತಸ್ಥರಾದ ಗುತ್ತಿಗೆದಾರರು ಭಾಗವಹಿಸಲು ಅನರ್ಹರಿರುತ್ತಾರೆ.

**ತಪಶೀಲು**

| ಕ್ರ.ಸಂ. | ಯೂನಿಟ್ ನಂಬರ್ | ವಲಯದ ಹೆಸರು | ಗುತ್ತಿಗೆಯ ಬಾಪ್ತಿನ ವಿವರ | ಗುತ್ತಿಗೆಯ ಅವಧಿ | ಟೆಂಡರ್ ಸ್ವೀಕರಿಸುವ ದಿನಾಂಕ ಮತ್ತು ವೇಳೆ | ಹರಾಜು ಮಾಡುವ ದಿನಾಂಕ ಮತ್ತು ವೇಳೆ | ಮುಂಗಡ ಠೇವಣಿ (ರೂ.) |
|---|---|---|---|---|---|---|---|
| 1 | 2 | 3 | 4 | 5 | 6 | 7 | 8 |
| 1. | 1 | ಸಾಗರ | ತೂಪ್ರ ಎಲೆಗಳ ಸಂಗ್ರಹಣೆ | 1.7.2004 ರಿಂದ 30.6.06 ರವರೆಗೆ ಅಥವಾ ಕರಾರು ಆದ ದಿನಾಂಕದಿಂದ 30.6.06 ರವರೆಗೆ | 28.6.2004 ರಂದು ಮಧ್ಯಾಹ್ನ 3.00 ಗಂಟೆಗೆ | 28.6.2004ರ ಮಧ್ಯಾಹ್ನ 3.30ರ ನಂತರ | 2000-00 |
| 2. | 2 | ಸಾಗರ | ಸಿನಿಮಾನ್ ಎಲೆಗಳು (ದಾಲ್ಚಿನ್ನಿ ಎಲೆಗಳು) | -"- | -"- | -"- | 2000-00 |
| 3. | 3 | ಸಾಗರ | ಜೇನುತುಪ್ಪ ಮತ್ತು ಮೇಣ | -"- | -"- | -"- | 2000-00 |
| 4. | 4 | ಸಾಗರ | ಹಾಲುಮಡ್ಡಿ ಮತ್ತು ಮೇಣದ ಸಂಗ್ರಹಣೆ | -"- | -"- | -"- | 2000-00 |
| 5. | 5 | ಕಾರ್ಗಲ್ | ಸಿನಿಮಾನ್ ಎಲೆಗಳು (ದಾಲ್ಚಿನ್ನಿ ಎಲೆಗಳು) | -"- | -"- | -"- | 2000-00 |
| 6. | 6 | ಕಾರ್ಗಲ್ | ಜೇನುತುಪ್ಪ ಮತ್ತು ಮೇಣ | -"- | -"- | -"- | 2000-00 |
| 7. | 7 | ಚೋರಡಿ | ತೂಪ್ರ ಎಲೆಗಳ ಸಂಗ್ರಹಣೆ | -"- | -"- | -"- | 2000-00 |
| 8. | 8 | ಸೊರಬ | ಸಿನಿಮಾನ್ ಎಲೆಗಳು (ದಾಲ್ಚಿನ್ನಿ ಎಲೆಗಳು) | -"- | -"- | -"- | 2000-00 |
| 9. | 9 | ಆನವಟ್ಟಿ | ತೂಪ್ರ ಎಲೆಗಳ ಸಂಗ್ರಹಣೆ | -"- | -"- | -"- | 2000-00 |
| 10. | 10 | ಹೊಸನಗರ | ತೂಪ್ರ ಎಲೆಗಳ ಸಂಗ್ರಹಣೆ | -"- | -"- | -"- | 2000-00 |
| 11. | 11 | ಹೊಸನಗರ | ಸಿನಿಮಾನ್ ಎಲೆಗಳು (ದಾಲ್ಚಿನ್ನಿ ಎಲೆಗಳು) | -"- | -"- | -"- | 2000-00 |
| 12. | 12 | ನಗರ | ತೂಪ್ರ ಎಲೆಗಳ ಸಂಗ್ರಹಣೆ | -"- | -"- | -"- | 2000-00 |
| 13. | 13 | ನಗರ | ಸಿನಿಮಾನ್ ಎಲೆಗಳು (ದಾಲ್ಚಿನ್ನಿ ಎಲೆಗಳು) | -"- | -"- | -"- | 2000-00 |
| 14. | 14 | ನಗರ | ಚಕ್ರಾಣಿ ಬಳ್ಳಿಗಳು | -"- | -"- | -"- | 2000-00 |

| 1 | 2 | 3 | 4 | 5 | 6 | 7 | 8 |
|---|---|---|---|---|---|---|---|
| 15. | 15 | ಸಗರ | ಹಾಲುಮಡ್ಡಿ ಮತ್ತು ಮೇಣದ ಸಂಗ್ರಹಣೆ | 1.7.2004 ರಿಂದ 30.6.06 ರವರೆಗೆ ಅಥವಾ ಕರಾರು ಆದ ದಿನಾಂಕದಿಂದ 30.6.06 ರವರೆಗೆ | 28.6.2004 ರಂದು ಮಧ್ಯಾಹ್ನ 3.00 ಗಂಟೆಗೆ | 28.6.2004ರ ಮಧ್ಯಾಹ್ನ 3.30ರ ನಂತರ | 2000-00 |
| 16. | 16 | ಶಿರಾಳಕೊಪ್ಪ | ತೂಪ್ರ ಎಲೆಗಳ ಸಂಗ್ರಹಣೆ | -"- | -"- | -"- | 2000-00 |
| 17. | 17 | ಶಿಕಾರಿಪುರ | ತೂಪ್ರ ಎಲೆಗಳ ಸಂಗ್ರಹಣೆ | -"- | -"- | -"- | 2000-00 |
| 18. | 18 | ಅಂಬ್ಲಿಗೊಳ | ತೂಪ್ರ ಎಲೆಗಳ ಸಂಗ್ರಹಣೆ | -"- | -"- | -"- | 2000-00 |

**ಷರತ್ತುಗಳು:**

1. ಸಾಗರ ವಿಭಾಗದಲ್ಲಿ ಅರಣ್ಯ ಗುತ್ತಿಗೆದಾರರಾಗಿ ನಿಮ್ಮ ಹೆಸರುಗಳನ್ನು ಪ್ರಸಕ್ತ ಸಾಲಿನಲ್ಲಿ ನೋಂದಾಯಿಸಿದವರು ಮಾತ್ರ ಮರು ಟೆಂಡರ್-ಕಂ-ಹರಾಜಿನಲ್ಲಿ ಭಾಗವಹಿಸಲು ಅವಕಾಶ ಇದೆ.
2. ಟೆಂಡರ್ ಫಾರಂನ ಬೆಲೆ ರೂ. 12.00 ಮತ್ತು ತೆರಿಗೆಗಳನ್ನು ಪಾವತಿಸಿ ಫಾರಂಗಳನ್ನು ಟೆಂಡರ್ ದಿನಂದು ಪಡೆಯಬಹುದು. ಟೆಂಡರ್ ಫಾರಂಗಳನ್ನು ವರ್ಗಾಯಿಸಲು ಬರುವುದಿಲ್ಲ. ಟೆಂಡರ್ ಫಾರಂಗಳನ್ನು ಹರಾಜಿನ ದಿನ 1.00 ಗಂಟೆಯವರೆಗೆ ಕಛೇರಿಯಲ್ಲಿ ಕೊಡಲಾಗುತ್ತದೆ.
3. ಹರಾಜಿನ ದಿನವೇ ಹೆಚ್ಚಿನ ಸವಾಲುದಾರರು ಗುತ್ತಿಗೆಯ ಅರ್ಧ ಭಾಗದ ಹಣ ಮತ್ತು ಪೂರ್ಣ ಗುತ್ತಿಗೆಯ ಹಣದ ಮೇಲೆ ಚಾಲ್ತಿಯಲ್ಲಿರುವ ತೆರಿಗೆಗಳನ್ನು (ವರಮಾನ ತೆರಿಗೆ ಸೇರಿದಂತೆ) ಸಂದಾಯ ಮಾಡಬೇಕು. ಉಳಿದ ಅರ್ಧಭಾಗದ ಗುತ್ತಿಗೆ ಹಣವನ್ನು ಗುತ್ತಿಗೆ ಕರಾರು ಮಾಡುವಾಗ ಸಂದಾಯ ಮಾಡಬೇಕು.
4. ಗುತ್ತಿಗೆದಾರರು ಟೆಂಡರ್ ಜೊತೆಯಲ್ಲಿ ನಿಗದಿಪಡಿಸಿದ ಇ.ಎಂ.ಡಿ ಯನ್ನು ಡಿ.ಡಿ. ರೂಪದಲ್ಲಿ ಮಾತ್ರ ಪಾವತಿಸಬೇಕು. ಡಿ.ಡಿ. ಮುಖಾಂತರ ಪಾವತಿಸದಿದ್ದ ಟೆಂಡರ್ ಫಾರಂಗಳನ್ನು ಸ್ವೀಕರಿಸಲಾಗುವುದಿಲ್ಲ. ಮತ್ತು ಸೇಲ್ಸ್ ಟ್ಯಾಕ್ಸ್ ಇನ್ಕಂಟ್ಯಾಕ್ಸ್ ಮತ್ತು ಸಾಲ್ವೆನ್ಸಿ ಸರ್ಟಿಫಿಕೇಟುಗಳನ್ನು ನಿಯಮಕ್ಕೆ ಅನುಸಾರವಾಗಿ ಲಗತ್ತಿಸಿರಬೇಕು.
5. ತಪ್ಪಿತಸ್ಥ ಗುತ್ತಿಗೆದಾರರು ಮರು ಟೆಂಡರ್ ಕಂ ಹರಾಜಿನಲ್ಲಿ ಭಾಗವಹಿಸುವುದನ್ನು ನಿಷೇಧಿಸಿದೆ.
6. ರಾಷ್ಟ್ರೀಯ ಉದ್ಯಾನವನ ಮತ್ತು ವನ್ಯಜೀವಿ ಅಭಯಾರಣ್ಯದಲ್ಲಿ ಕಿರು ಕಾಡು ಉತ್ಪನ್ನದ ಸಂಗ್ರಹಣೆಯನ್ನು ನಿಷೇಧಿಸಲಾಗಿದೆ.
7. ಜಯಶೀಲರಾದ ಗುತ್ತಿಗೆದಾರರು ಅದೇ ದಿನದಂದು ಶೇಕಡ 50 ಭಾಗದ ಗುತ್ತಿಗೆ ಹಣ ಮತ್ತು ಪೂರ್ಣತೆರಿಗೆಗಳನ್ನು ಪಾವತಿಸತಕ್ಕದ್ದು. ಬಾಕಿ ಉಳಿದ ಶೇಕಡ 50 ಭಾಗದ ಹಣವನ್ನು ಸ್ಥಿರೀಕರಣದ ಆದೇಶ ತಲುಪಿದ ನಂತರದಲ್ಲಿ 15 (ಹದಿನೈದು) ದಿನಗಳೊಳಗಾಗಿ ಪಾವತಿಸತಕ್ಕದ್ದು. ತಪ್ಪಿದ್ದಲ್ಲಿ ಬಾಕಿ ಹಣಕ್ಕೆ ಬಡ್ಡಿಯನ್ನು ವಸೂಲಿ ಮಾಡಲು ಕ್ರಮ ಜರುಗಿಸಲಾಗುವುದು.
8. ಹರಾಜಿನಲ್ಲಿ ಟೆಂಡರ್‌ದಾರರ: ಬಿಡ್ಡುದಾರರ ಸವಾಲನ್ನು ಸ್ವೀಕರಿಸುವ: ತಿರಸ್ಕರಿಸುವ ಅಥವಾ ತಿದ್ದುಪಡಿ ಮಾಡುವ ಹಕ್ಕನ್ನು ಕಾಯ್ದಿರಿಸಿಕೊಂಡಿರುತ್ತದೆ.
9. ಅನಿವಾರ್ಯ ಕಾರಣಗಳಿಂದಾಗಿ ಹರಾಜನ್ನು ಮುಂದೂಡುವ: ರದ್ದುಪಡಿಸುವ: ತಿರಸ್ಕರಿಸುವ ಅಧಿಕಾರವನ್ನು ಕಾಯ್ದಿರಿಸಿಕೊಂಡಿದೆ.
10. ಹೆಚ್ಚಿನ ವಿವರಗಳನ್ನು ಈ ಕಛೇರಿಯಿಂದ ಕಛೇರಿಯ ವೇಳೆಯಲ್ಲಿ ಪಡೆದುಕೊಳ್ಳಬಹುದು.

ಉಪ ಅರಣ್ಯ ಸಂರಕ್ಷಣಾಧಿಕಾರಿ,
ಪಿ.ಆರ್.237 ಸಾಗರ ವಿಭಾಗ, ಸಾಗರ.

## ಜಲಸಂಪನ್ಮೂಲ ಇಲಾಖೆ

## ಕಾರ್ಯಪಾಲಕ ಇಂಜಿನಿಯರ್ ರವರ ಕಛೇರಿ, ನಂ. 5, ಭದ್ರಾ ನಾಲಾ ವಿಭಾಗ, ದಾವಣಗೆರೆ

## ಸಂಖ್ಯೆ: ದಾನಾವಿ-5: ಸ೯ಂ-2: ಟೆಂಡರ್: 2004-05:428:18 ದಿನಾಂಕ: 25ನೇ ಮೇ 2004

ಕರ್ನಾಟಕ ಸರ್ಕಾರದ ರಾಜ್ಯಪಾಲರ ಪರವಾಗಿ ಈ ಕೆಳಕಂಡ ಕಾಮಗಾರಿಗಳಿಗಾಗಿ ಲೋಕೋಪಯೋಗಿ: ನೀರಾವರಿ ಇಲಾಖೆ (ಜಲಸಂಪನ್ಮೂಲ ಇಲಾಖೆ)ಯಲ್ಲಿ ನೋಂದಣಿಯಾದ ಹಾಗೂ ನೋಂದಣಿ ಚಾಲ್ತಿಯಲ್ಲಿರುವ ಗುತ್ತಿಗೆದಾರರಿಂದ ಸೀಲು ಮಾಡಿದ ಐಟಂವಾರು ಟೆಂಡರುಗಳನ್ನು ದಿನಾಂಕ: 7.7.2004ರ ಸಂಜೆ 4.00 ಗಂಟೆಯವರೆಗೆ ಈ ಕೆಳಗೆ ಸಹಿ ಮಾಡಿದವರ ಕಛೇರಿಯಲ್ಲಿ ಸ್ವೀಕರಿಸಲಾಗುವುದು. ಸಾಧ್ಯವಾದರೆ ಅದೇ ದಿನ ಟೆಂಡರ್‌ಗಳನ್ನು ತೆರೆಯಲಾಗುವುದು. ಇಲ್ಲವಾದಲ್ಲಿ ಮುಂದೆ ಅನುಕೂಲವಾದ ಕೆಲಸದ ದಿನದಂದು ಗುತ್ತಿಗೆದಾರರು ನಿಯೋಜಿಸಲ್ಪಟ್ಟವರ ಸಮ್ಮುಖದಲ್ಲಿ ತೆರೆಯಲಾಗುವುದು. ಕಾಮಗಾರಿಗಳ ವಿವರ ಈ ಕೆಳಗಿನಂತಿರುತ್ತದೆ.

### ಅಲ್ಪಾವಧಿ ಟೆಂಡರ್

| | | | | |
|---|---|---|---|---|
| 1. | ಕೆಲಸ ಮುಗಿಸುವ ಅವಧಿ (ಮಳೆಗಾಲ ಬಿಟ್ಟು) | ಮೂರು ತಿಂಗಳು | 2. | ಟೆಂಡರ್ ಫಾರಂಗೆ ಶುಲ್ಕದ ಸಮೇತ ಅರ್ಜಿ ಸಲ್ಲಿಸುವ ಕೊನೆ ದಿನಾಂಕ: 30.6.2004 |
| 3. | ಖಾಲಿ ಟೆಂಡರ್ ಫಾರಂ ಕೊಡುವ ದಿನಾಂಕ | 05.07.2004 | 4. | ಭರ್ತಿ ಮಾಡಿದ ಟೆಂಡರ್ ಷೆಡ್ಯೂಲ್‌ಗಳನ್ನು ಸಲ್ಲಿಸುವ ದಿನಾಂಕ: 07.07.2004 |
| 5. | ಷರಾ (ಕ್ರಮ ಸಂಖ್ಯೆ 1 ರಿಂದ 10 ಮತ್ತು 20)<br>(ಕ್ರಮ ಸಂಖ್ಯೆ 11 ರಿಂದ 19ನೇ ವರೆಗೆ) | ಒಂದನೇ ಕರೆ<br>ಎರಡನೇ ಕರೆ | 6. | ಟೆಂಡರ್ ಫಾರಂ ಬೆಲೆ ತೆರಿಗೆ ಸೇರಿ ರೂ.500/-ಗಳು. |

| ಕ್ರಮ ಸಂಖ್ಯೆ | ಕಾಮಗಾರಿಯ ಹೆಸರು | ಕೆಲಸದ ಟೆಂಡರ್ ಮೊಬಲಗು (ಲಕ್ಷರೂ.ಗಳಲ್ಲಿ) | ಇ.ಎಂ.ಡಿ. (ರೂ.ಗಳಲ್ಲಿ) | ಗುತ್ತಿಗೆದಾರರ ದರ್ಜೆ |
|---|---|---|---|---|
| 1 | 2 | 3 | 4 | 5 |
| 1 | ದಾವಣಗೆರೆ ಶಾಖಾ ನಾಲೆಯ 83ನೇ ಕಿಮೀ. ಯಲ್ಲಿ ಆರ್.ಸಿ.ಸಿ. ಡೆಕ್‌ಸ್ಲಾಬ್ ಸೇತುವೆ ನಿರ್ಮಿಸುವುದು ಮತ್ತು ರಕ್ಷಣಾ ಕೆಲಸ ಮಾಡುವುದು. | 4.00 | 10000 | ದರ್ಜೆ 3 ಮತ್ತು ಮೇಲ್ಪಟ್ಟು |
| 2 | ಬಸಾಪುರದಿಂದ ಬಸವನಾಳ್ ಗೊಲ್ಲರಹಟ್ಟಿ ರಸ್ತೆಯ 0.00 ದಿಂದ 4.50 ಕಿಮೀ. ವರೆಗೆ ಅಡ್ಡ ಮೋರಿಗಳನ್ನು ನಿರ್ಮಿಸುವ ಕಾಮಗಾರಿ. | 3.00 | 7500 | -ಡೂ- |
| 3 | 15ನೇ ಸ್ಲೂಯಿಸ್ ನಾಲೆಯ 3.00 ರಿಂದ 7ನೇ ಕಿಮೀ. ವರೆಗಿನ ಸರ್ವಿಸ್ ರಸ್ತೆಯನ್ನು ಅಭಿವೃದ್ಧಿಪಡಿಸುವುದು. | 3.00 | 7500 | -ಡೂ- |
| 4 | 13ನೇ ಸ್ಲೂಯಿಸ್ ನಾಲೆಯ 0.00 ರಿಂದ 4.20 ಕಿಮೀ. ವರೆಗಿನ ಸರ್ವಿಸ್ ರಸ್ತೆಯನ್ನು ಅಭಿವೃದ್ಧಿಪಡಿಸುವುದು. | 4.00 | 10000 | -ಡೂ- |
| 5 | ಹರಪನಹಳ್ಳಿ ವಿತರಣಾ ನಾಲೆಯಲ್ಲಿ 11 ರಿಂದ 12 ಕಿಮೀ ವರೆಗೆ ಹೂಳು ಮತ್ತು ಜಂಗಲ್ ತೆಗೆಯುವುದು ಮತ್ತು ಸರ್ವಿಸ್ ರಸ್ತೆಯನ್ನು ಅಭಿವೃದ್ಧಿಪಡಿಸುವುದು. | 1.50 | 3750 | -ಡೂ- |
| 6 | ಹರಪನಹಳ್ಳಿ ವಿತರಣಾ ನಾಲೆಯಲ್ಲಿ 12.20 ರಿಂದ 13.00 ಕಿಮೀ. ವರೆಗೆ ಹೂಳು ಮತ್ತು ಜಂಗಲ್ ತೆಗೆಯುವುದು ಮತ್ತು ಸರ್ವಿಸ್ ರಸ್ತೆಯನ್ನು ಅಭಿವೃದ್ಧಿ ಪಡಿಸುವುದು. | 2.00 | 5000 | -ಡೂ- |
| 7 | ಹರಪನಹಳ್ಳಿ ವಿತರಣಾ ನಾಲೆಯಲ್ಲಿ 13.30 ರಿಂದ 14.00 ಕಿಮೀ. ವರೆಗೆ ಹೂಳು ಮತ್ತು ಜಂಗಲ್ ತೆಗೆಯುವುದು ಮತ್ತು ಸರ್ವಿಸ್ ರಸ್ತೆಯನ್ನು ಅಭಿವೃದ್ಧಿ ಪಡಿಸುವುದು. | 1.50 | 3750 | -ಡೂ- |
| 8 | ಹರಪನಹಳ್ಳಿ ವಿತರಣಾ ನಾಲೆಯಲ್ಲಿ 14.10 ರಿಂದ 14.90 ಕಿಮೀ. ವರೆಗೆ ಹೂಳು ಮತ್ತು ಜಂಗಲ್ ತೆಗೆಯುವುದು ಮತ್ತು ಸರ್ವಿಸ್ ರಸ್ತೆಯನ್ನು ಅಭಿವೃದ್ಧಿ ಪಡಿಸುವುದು. | 1.50 | 3750 | -ಡೂ- |
| 9 | ಹರಪನಹಳ್ಳಿ ವಿತರಣಾ ನಾಲೆಯಲ್ಲಿ 15.00 ರಿಂದ 16.00 ಕಿಮೀ. ವರೆಗೆ ಹೂಳು ಮತ್ತು ಜಂಗಲ್ ತೆಗೆಯುವುದು ಮತ್ತು ಸರ್ವಿಸ್ ರಸ್ತೆಯನ್ನು ಅಭಿವೃದ್ಧಿ ಪಡಿಸುವುದು. | 1.50 | 3750 | -ಡೂ- |
| 10 | ಆರ್-4 ನಿಯಂತ್ರಣದಿಂದ ಬೇತೂರು-ಹಿರೇಮೇಗಳಗೆರೆಗೆ ಸೇರುವ ರಸ್ತೆಗೆ ಜಲ್ಲಿ ಹಾಕುವುದು 2.50 ರಿಂದ 4.00 ಕಿಮೀ. ವರೆಗೆ | 2.00 | 5000 | -ಡೂ- |
| 11 | ಹಿರೇಮೇಗಳಗೆರೆ- ಜಂಬುಲಿಂಗನಹಳ್ಳಿ ರಸ್ತೆಯನ್ನು ಅಭಿವೃದ್ಧಿ ಪಡಿಸುವುದು 3.00 ರಿಂದ 4.00 ಕಿಮೀ. ವರೆಗೆ (2ನೇ ಪದರು ಜಲ್ಲಿ ಹಾಕುವುದು). | 1.00 | 2500 | ದರ್ಜೆ 4 ಮತ್ತು ಮೇಲ್ಪಟ್ಟು |
| 12 | ಹಿರೇಮೇಗಳಗೆರೆ-ಜಂಬುಲಿಂಗನಹಳ್ಳಿ ರಸ್ತೆಯನ್ನು ಅಭಿವೃದ್ಧಿ ಪಡಿಸುವುದು 2.0 ರಿಂದ 3.0 ಕಿಮೀ. ವರೆಗೆ | 1.00 | 2500 | -ಡೂ- |
| 13 | ಹಿರೇಮೇಗಳಗೆರೆ-ಜಂಬುಲಿಂಗನಹಳ್ಳಿ ರಸ್ತೆಯನ್ನು ಅಭಿವೃದ್ಧಿ ಪಡಿಸುವುದು 1.0 ರಿಂದ 2.0 ಕಿಮೀ. ವರೆಗೆ | 1.00 | 2500 | -ಡೂ- |
| 14 | ಹಿರೇಮೇಗಳಗೆರೆ-ಜಂಬುಲಿಂಗನಹಳ್ಳಿ ರಸ್ತೆಯನ್ನು ಅಭಿವೃದ್ಧಿ ಪಡಿಸುವುದು 0.0 ರಿಂದ 1.0 ಕಿಮೀ. ವರೆಗೆ | 1.00 | 2500 | -ಡೂ- |
| | **2705 ಕಾಡಾ ಕಾಮಗಾರಿಗಳು** | | | |
| 15 | ದಾವಣಗೆರೆ ಬ್ರಾಂಚ್ 9ನೇ ಬಿ ವಿತರಣಾ ನಾಲೆಯ ಪಿ.ಓ.ನಂ. 8 ರಲ್ಲಿ ಎಫ್.ಸಿ. ನಿರ್ಮಿಸುವುದು. | 1.50 | 3750 | ದರ್ಜೆ 3 ಮತ್ತು ಮೇಲ್ಪಟ್ಟು |

| 1 | 2 | 3 | 4 | 5 |
|---|---|---|---|---|
| 16 | ದಾವಣಗೆರೆ ಬ್ರಾಂಚ್ 6ನೇ ಎ ವಿತರಣಾ ನಾಲೆಯ ಪಿ.ಓ.ನಂ. 9 ರಲ್ಲಿ ಎಫ್.ಸಿ. ನಿರ್ಮಿಸುವುದು. | 2.00 | 5000 | ದರ್ಜೆ 3 ಮತ್ತು ಮೇಲ್ಪಟ್ಟು |
| 17 | ದಾವಣಗೆರೆ ಬ್ರಾಂಚ್ 6ನೇ ಎ ವಿತರಣಾ ನಾಲೆಯ ಪಿ.ಓ.ನಂ. 10 ರಲ್ಲಿ ಎಫ್.ಸಿ. ನಿರ್ಮಿಸುವುದು. | 2.00 | 5000 | -ಡೂ- |
| 18 | ದಾವಣಗೆರೆ ಬ್ರಾಂಚ್ 7ನೇ ವಿತರಣಾ ನಾಲೆಯ ಕೈದಾಳ್ ಮೈನರ್‌ನ ಪಿ.ಓ.ನಂ. 1,2, ಮತ್ತು 3 ಗಳಲ್ಲಿ ಎಫ್.ಸಿ. ನಿರ್ಮಿಸುವುದು. | 2.00 | 5000 | -ಡೂ- |
| 19 | ಮಳಲ್ಕೆರೆ ಕೆರೆಯಿಂದ 6ನೇ ಎ ವಿತರಣಾ ನಾಲೆಯ ಅಚ್ಚುಕಟ್ಟಿಗೆ ಹೋಗುವ ರಸ್ತೆ ನಿರ್ಮಿಸುವುದು. | 2.00 | 5000 | -ಡೂ- |
| 20 | ಚನ್ನಗಿರಿ ತಾ: ಕತ್ತಲಗೆರೆ ಗ್ರಾಮದ ರಿ.ಸರ್ವೆ ನಂ. 28ರಲ್ಲಿ ಫೀಲ್ಡ್‌ಡ್ರೈನ್ ಮತ್ತು ರಕ್ಷಣಾ ಕಾಮಗಾರಿ ಮಾಡುವುದು. | 1.75 | 4375 | -ಡೂ- |

ಕಾಲಂ ನಂ. 4 ರಲ್ಲಿ ನಮೂದಿಸಲಾಗಿರುವ ಇ.ಎಂ.ಡಿ. ಹಣವನ್ನು ರಾಷ್ಟ್ರೀಕೃತ ಬ್ಯಾಂಕ್‌ನಿಂದ ಪಡೆಯಲಾದ ಡಿಮ್ಯಾಂಡ್ ಡ್ರಾಫ್ಟ್ ಅಥವಾ ಫಿಕ್ಸೆಡ್ ಡಿಪಾಜಿಟ್ ರಾಷ್ಟ್ರೀಯ ಉಳಿತಾಯ ಪತ್ರಗಳು, ಕಾರ್ಯಪಾಲಕ ಇಂಜಿನಿಯರ್, ನಂ. 5, ನಾಲಾ ವಿಭಾಗ, ದಾವಣಗೆರೆ ಇವರ ಪರವಾಗಿ ಅಡಮಾನವಾಗಿಟ್ಟು ಟೆಂಡರ್ ಜೊತೆಯಲ್ಲಿ ಸಲ್ಲಿಸತಕ್ಕದ್ದು. ಇ.ಎಂ.ಡಿ. ಇಲ್ಲದ ಟೆಂಡರ್‌ಗಳನ್ನು ತಿರಸ್ಕರಿಸಲಾಗುವುದು. ಚೆಕ್ ಅಥವಾ ಇನ್ನಾವುದೇ ರೂಪದಲ್ಲಿ ಇ.ಎಂ.ಡಿ. ಹಣವನ್ನು ಅಂಗೀಕರಿಸಲಾಗುವುದಿಲ್ಲ. ಖಾಲಿ ಟೆಂಡರ್ ಫಾರಂಗಳಿಗೆ ಸಲ್ಲಿಸಲಾಗಿದ್ದ ಮೊತ್ತವನ್ನು ಯಾವುದೇ ಸಂದರ್ಭದಲ್ಲಿ ಹಿಂತಿರುಗಿಸಲಾಗುವುದಿಲ್ಲ. ಠೇವಣಿ ಕ್ರಮ ಬದ್ಧತೆಯು ಕನಿಷ್ಠ 90 ದಿನಗಳ ಅವಧಿಯನ್ನು ಒಳಗೊಂಡಿರಬೇಕು.

**ಸೂಚನೆಗಳು:**

1 ಯಾವುದೇ ಕಾರಣ ನೀಡದೆ ಟೆಂಡರ್‌ಗಳನ್ನು ಮುಂದೂಡುವ ಅಂಗೀಕರಿಸುವ ಅಥವಾ ತಿರಸ್ಕರಿಸುವ ಹಕ್ಕನ್ನು ಕೆಳಗೆ ಸಹಿ ಮಾಡಿರುವ ಅಧಿಕಾರಿಯವರು ಕಾಯ್ದಿರಿಸಿಕೊಂಡಿರುತ್ತಾರೆ.

2 ಷರತ್ತುಗಳನ್ನೊಳಗೊಂಡ ಟೆಂಡರ್‌ಗಳನ್ನು ಅಂಗೀಕರಿಸಲಾಗುವುದಿಲ್ಲ.

3 ಗುತ್ತಿಗೆದಾರರು ಕೆಲಸವನ್ನು ನಿಗದಿಪಡಿಸಿದ ಅವಧಿಯಲ್ಲಿಯೇ ಮುಗಿಸಿ ಕೊಡುವುದಾಗಿ ದೃಢೀಕರಣ ಪತ್ರ ಸಲ್ಲಿಸಬೇಕು.

4 ಟೆಂಡರ್ ಹಾಕುವಾಗ ಗುತ್ತಿಗೆದಾರರು ಕಾಮಗಾರಿಯ ಹೆಸರನ್ನು ಲಕೋಟೆ ಮೇಲೆ ದಪ್ಪವಾಗಿ ಸ್ಪಷ್ಟವಾಗಿ ಬರೆಯತಕ್ಕದ್ದು.

5 ಟೆಂಡರ್‌ನಲ್ಲಿ ಸೂಚಿಸಲಾದ ದಿನಾಂಕಗಳು ರಜಾ ಎಂದು ಘೋಷಿಸಲ್ಪಟ್ಟರೆ ಮುಂದಿನ ದಿನವನ್ನು ಟೆಂಡರ್‌ನಲ್ಲಿ ತಿಳಿಸಲಾದ ದಿನಾಂಕಕ್ಕೆ ಬದಲಾಗಿ ಪರಿಗಣಿಸಲಾಗುವುದು.

**ಶಿವಾನಂದ ಎಸ್. ಬಣಕಾರ**

ಪಿ.ಆರ್.238 ಕಾರ್ಯಪಾಲಕ ಅಭಿಯಂತರರು, ನಂ. 5, ಭದ್ರಾ ನಾಲಾ ವಿಭಾಗ, ದಾವಣಗೆರೆ.

## ತೋಟಗಾರಿಕೆ ಉಪ ನಿರ್ದೇಶಕರವರ ಕಛೇರಿ, ಕಬ್ಬನ್ ಉದ್ಯಾನವನ, ಬೆಂಗಳೂರು-1.

## ಟೆಂಡರ್ ಪ್ರಕಟಣೆ

**ಸಂಖ್ಯೆ: ತೋಉನಿ:ಕಉ:ವಿನಿ2:06:04-05 ದಿನಾಂಕ: 25ನೇ ಮೇ 2004**

ಕಬ್ಬನ್ ಉದ್ಯಾನವನ ಹಾಗೂ ಲಾಲಾಬಾಗ್ ಸಸ್ಯ ತೋಟಗಳ ಉಪಯೋಗಕ್ಕೆ ವರ್ಷದಲ್ಲಿ ಎರಡು ಬಾರಿ ನಡೆಯುವ ಫಲಪುಷ್ಪ ಪ್ರದರ್ಶನದ ಸಲುವಾಗಿ ಕುಂಡಗಳಲ್ಲಿ ಬೆಳೆಸುವ ಅಲಂಕಾರಿಕ ಹೂವಿನ ಗಿಡಗಳ ಹಾಗೂ ಹೂವಿನ ಮಡಿಗಳಿಗೆ ಬೇಕಾಗುವ ಕೊಟ್ಟಿಗೆ ಗೊಬ್ಬರ, ಕುದುರೆ ಗೊಬ್ಬರ, ಕೆಂಪುಮಣ್ಣು, ಮರಳು, ಮಣ್ಣಿನ ಕುಂಡಗಳು, ರಾಸಾಯನಿಕ ಗೊಬ್ಬರ, ಸಸ್ಯ ಸಂರಕ್ಷಣೆ ಔಷಧಿಗಳು ಹಾಗೂ ತೋಟಗಾರಿಕಾ ಸಲಕರಣೆ ಇತ್ಯಾದಿಗಳನ್ನು 2004-05ನೇ ಸಾಲಿಗಾಗಿ ಒಂದು ವರ್ಷದ ಅವಧಿಯಲ್ಲಿ ಸರಬರಾಜು ಮಾಡುವುದಕ್ಕೆ ಟೆಂಡರ್‌ಗಳನ್ನು ಆಹ್ವಾನಿಸಿ ದರಗಳನ್ನು ಅನುಮೋದಿಸಿಕೊಳ್ಳಲಾಗಿದೆ. ಆದುದರಿಂದ ಈ ಕೆಳಕಂಡ ಷರತ್ತುಗಳಿಗೆ ಒಪ್ಪಿದಲ್ಲಿ ಈ ಕೆಳಗೆ ಸೂಚಿಸಿರುವ ಸಾಮಗ್ರಿ ಹಾಗೂ ಪರಿಕರಗಳನ್ನು ಸರಬರಾಜು ಮಾಡಲು ನಿಗದಿತ ಟೆಂಡರ್ ಫಾರಂಗಳನ್ನು ತೋಟಗಾರಿಕೆ ಉಪ ನಿರ್ದೇಶಕರು, ಕಬ್ಬನ್ ಪಾರ್ಕ್, ಬೆಂಗಳೂರು ರವರ ಕಛೇರಿಯಿಂದ ದಿನಾಂಕ: 21.6.2004 ರಿಂದ 22.6.2004 ರವರೆಗೆ ರೂ. 500-00 ಗಳನ್ನು ಪಾವತಿಸಿ ಪಡೆಯಬಹುದು. ಭರ್ತಿಮಾಡಿದ ಟೆಂಡರ್‌ಗಳನ್ನು ಮೊಹರು ಮಾಡಿದ ಲಕೋಟೆಯೊಂದಿಗೆ ತೋಟಗಾರಿಕೆ ಉಪ ನಿರ್ದೇಶಕರು, ಕಬ್ಬನ್ ಪಾರ್ಕ್, ಬೆಂಗಳೂರು ರವರ ಕಛೇರಿಗೆ ದಿನಾಂಕ: 23.6.2004 ರಂದು ಸಂಜೆ 4.00 ಗಂಟೆಯೊಳಗೆ ಸಲ್ಲಿಸಬೇಕು ಟೆಂಡರ್‌ಗಳನ್ನು ಅಂದೇ ದಿನಾಂಕ: 23.6.2004 ರಂದು ಸಂಜೆ 5.00 ಗಂಟೆಗೆ ಹಾಜರಿರುವ ಟೆಂಡರ್‌ದಾರರ ಸಮ್ಮುಖದಲ್ಲಿ ತೆರೆಯಲಾಗುವುದು.

**ಷರತ್ತು ಮತ್ತು ನಿಬಂಧನೆಗಳು:**

1. ಟೆಂಡರ್ ಸಲ್ಲಿಸುವ ಸಮಯದಲ್ಲಿ ಪ್ರತಿ ಟೆಂಡರ್ ಫಾರಂಗೆ ರೂ. 10,000=00 ಇ.ಎಂ.ಡಿ. ಬ್ಯಾಂಕ್ ಡಿಮ್ಯಾಂಡ್ ಡ್ರಾಫ್ಟ್‌ನ್ನು Deputy Director of Horticulture, Cubbon Park, Bangalore-1 ರವರ ಹೆಸರಿಗೆ ಪಡೆದು ಸಲ್ಲಿಸಬೇಕು. ಯಶಸ್ವಿ ಟೆಂಡರ್‌ದಾರರ ಇ.ಎಂ.ಡಿ. ಹಣ ಬಿಟ್ಟು ಉಳಿದ ಟೆಂಡರ್‌ದಾರರ ಇ.ಎಂ.ಡಿ. ಹಣವನ್ನು ಟೆಂಡರ್‌ಗಳ ಪರಿಶೀಲನೆ ನಂತರ ಹಿಂತಿರುಗಿಸಲಾಗುವುದು. ಇಂ.ಎಂ.ಡಿ. ಠೇವಣಿಗೆ ಯಾವುದೇ ಬಡ್ಡಿ ಹಣವನ್ನು ಇಲಾಖೆಯಿಂದ ಪಾವತಿಸಲಾಗುವುದಿಲ್ಲ.
2. ಬೇಕಾಗುವ ಕೊಟ್ಟಿಗೆ ಗೊಬ್ಬರ ಅಪ್ಪಟ ಸಗಣಿ ಗೊಬ್ಬರವಾಗಿರಬೇಕು. ಹುಲ್ಲು ಮಣ್ಣು ಮತ್ತು ಪ್ರಾಣಿಗಳ ವರ್ಜಿತ ಭಾಗಗಳನ್ನು ಸೇರಿಸುವುದು ಇತ್ಯಾದಿ ಬೆರಕೆಯಾಗಿದ್ದಲ್ಲಿ ತಿರಸ್ಕರಿಸಲಾಗುವುದು. ಕಳಪೆ ಗೊಬ್ಬರ ಹಾಗೂ ಸರಿಯಾದ ಪ್ರಮಾಣದಲ್ಲಿ ಇಲ್ಲದಿದ್ದ ಪಕ್ಷದಲ್ಲಿ ಸಹ ತಿರಸ್ಕರಿಸಲಾಗುವುದು.
3. ಬೇಕಾಗುವ ಕುದುರೆ ಗೊಬ್ಬರ ಅಪ್ಪಟ ಕುದುರೆ ಲದ್ದಿ ಆಗಿರಬೇಕು ಹುಲ್ಲು, ಮಣ್ಣು ಬತ್ತದ ಹುಲ್ಲು ಹೊಟ್ಟು ಇತ್ಯಾದಿ ಬೆರಕೆಯಾಗಿದ್ದಲ್ಲಿ ತಿರಸ್ಕರಿಸಲಾಗುವುದು.
4. ಬೇಕಾಗುವ ಕೆಂಪುಮಣ್ಣು ಅಪ್ಪಟ ನಯವಾದ ಕೆಂಪು ಬಣ್ಣದ ಮಣ್ಣು (ಟಾಪ್ ಸಾಯಿಲ್) ಆಗಿರಬೇಕು. ಮರಳು, ಗ್ರಾವೆಲ್ ಇತ್ಯಾದಿ ಇದ್ದಲ್ಲಿ ತಿರಸ್ಕರಿಸಲಾಗುವುದು ಹಾಗೂ ನಿಯಮಾನುಸಾರ ಪ್ರತಿ ಸಿ.ಎಂ.ಟಿ.ಗೆ. ರೂ.4 ರಾಯಲ್ಟಿಯನ್ನು ಬಿಲ್ಲಿನ ಮೂಲದಲ್ಲಿ ಕಟಾಯಿಸಲಾಗುವುದು.
5. ಬೇಕಾಗುವ ಮರಳು ಬಿಳಿ ಬಣ್ಣದ ನಯವಾದ ಗ್ರಾವೆಲ್ ಬೆರಕೆ ಇಲ್ಲದ ಮರಳನ್ನು ಸರಬರಾಜು ಮಾಡಬೇಕು ಹಾಗೂ ಸರಿಯಾದ ಪ್ರಮಾಣದಲ್ಲಿ ಇರಬೇಕು. ನಿಯಮಾನುಸಾರ ಪ್ರತಿ ಸಿ.ಎಂ.ಟಿ. ಗೆ ರೂ.46-00 ರಂತೆ ಬಿಲ್ಲಿನ ಮೂಲದಲ್ಲಿ ರಾಯಲ್ಟಿ ಹಾಗೂ K.S.T & I.T ಯನ್ನು ನಿಯಮಾನುಸಾರ ಕಟಾಯಿಸಲಾಗುವುದು. ಒಂದು ವೇಳೆ ಮರಳು ಖರೀದಿಸಿದ ಸ್ಥಳದಲ್ಲಿ ರಾಯಲ್ಟಿ ಪಾವತಿ ಮಾಡಿದ್ದಲ್ಲಿ ಅದರ ದಾಖಲೆಗಳನ್ನು ಈ ಕಛೇರಿಗೆ ಒದಗಿಸಬೇಕು.
6. ಮೇಲೆ ತಿಳಿಸಿದ ಕ್ರಮ ಸಂಖ್ಯೆ 1 ರಿಂದ 5 ವರೆಗಿನ ಸಾಮಗ್ರಿಗಳನ್ನು ಕಬ್ಬನ್ ಪಾರ್ಕ್ ನರ್ಸರಿ ಹಾಗೂ ಅಧೀನದ ಇತರೆ ವಿಭಾಗಗಳಿಗೆ ಹಾಗೂ ಲಾಲ್‌ಬಾಗ್ ಸಸ್ಯ ತೋಟದ ಅಧಿಕಾರಿಗಳು ಸೂಚಿಸಿದ ಸ್ಥಳಗಳಿಗೆ ಗುತ್ತಿಗೆದಾರರು ಸ್ವಂತ ಖರ್ಚಿನಲ್ಲಿ ಸಾಗಾಣಿಕೆ ಮಾಡಿ ಅಧಿಕಾರಿಗಳು ಸೂಚಿಸುವ ಸ್ಥಳದಲ್ಲಿ ಸಾರುವೆ ಹಾಕಿ ಘನ ಮೀಟರ್ ಮಾಪಕದಲ್ಲಿ ಅಳತೆ ತೋರಿಸಬೇಕು ಹಾಗೂ ನಿಗದಿತ ಟೆಂಡರ್ ನಮೂನೆಯಲ್ಲಿ ಒಂದು ಘನ ಮೀಟರ್‌ಗೆ ದರವನ್ನು ಸೂಚಿಸಬೇಕು.
7. ಯಶಸ್ವಿ ಟೆಂಡರ್ ದಾರರು ನಮೂದಿಸಿರುವ ದರಗಳನ್ನು ಅನುಮೋದಿಸಿ ಸರಬರಾಜು ಆದೇಶ ನೀಡಿದ 15 ದಿನಗಳ ಒಳಗೆ ಸರಬರಾಜು ಮಾಡಬೇಕು. ತಪ್ಪಿದಲ್ಲಿ ಸರಬರಾಜು ಆದೇಶವನ್ನು ರದ್ದುಪಡಿಸಿ ಅಂತಹ ಗುತ್ತಿಗೆದಾರರ ಇ.ಎಂ.ಡಿ. ಹಣವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಾಗುವುದು ಮತ್ತು ಕಾನೂನಿನಂತೆ ಕ್ರಮ ಜರುಗಿಸಲಾಗುವುದು. ಅನುದಾನದ ಲಭ್ಯತೆ ಹಾಗೂ ಅಗತ್ಯಕ್ಕೆ ಅನುಗುಣವಾಗಿ ಮಾತ್ರ ಸರಬರಾಜು ಆದೇಶ ನೀಡಲಾಗುವುದು.
8. ನಿರ್ದಿಷ್ಟ ಪ್ರಮಾಣದ ಪರಿಕರಗಳ ಸರಬರಾಜು ನಿರೀಕ್ಷೆಯನ್ನು ಗುತ್ತಿಗೆದಾರರು ಮಾಡುವಂತಿಲ್ಲ. ಸರಬರಾಜು ನೀಡಿದ ಪ್ರಮಾಣ ಉತ್ತಮ ಗುಣಮಟ್ಟ ಕಾಯ್ದಿರಿಸಬೇಕು ಹಾಗೂ ಪದಾರ್ಥಗಳನ್ನು ಸರಬರಾಜು ಮಾಡಿ ಅಳತೆ ಕೊಟ್ಟ ನಂತರ ಮಾತ್ರ ಹಣ ಪಾವತಿಗೆ ಕ್ರಮ ಕೈಗೊಳ್ಳಲಾಗುವುದು.
9. ಮೇಲೆ ಸೂಚಿಸಿದ ಕೆಂಪುಮಣ್ಣು, ಕೊಟ್ಟಿಗೆ ಗೊಬ್ಬರ, ಮರಳು ಮತ್ತು ಕುದುರೆ ಗೊಬ್ಬರಗಳನ್ನು ಸರಬರಾಜು ಮಾಡಲು ನಾಲ್ಕು ಟೆಂಡರ್ ಫಾರಂಗಳನ್ನು ಪಡೆದು ಒಂದೊಂದಕ್ಕೆ ರೂ.10,000=00 ಗಳ ಮೌಲ್ಯದ ಬ್ಯಾಂಕ್ ಡ್ರಾಫ್ಟ್‌ನ್ನು ಠೇವಣಿಯಾಗಿ ಟೆಂಡರ್ ಫಾರಂ ಜೊತೆಯಲ್ಲಿ ಲಗತ್ತಿಸಿರಬೇಕು ಗುತ್ತಿದಾರರು ಯಾವುದೇ ಷರತ್ತುಗಳನ್ನು ಟೆಂಡರ್‌ನಲ್ಲಿ ನಮೂದಿಸಿದಲ್ಲಿ ಅಂತಹ ಟೆಂಡರ್‌ಗಳನ್ನು ತಿರಸ್ಕರಿಸಲಾಗುವುದು.
10. ಹುಚ್ಚೆಳ್ಳು ಹಿಂಡಿ, ಬೇವಿನ ಹಿಂಡಿ ಮತ್ತು ಹೊಂಗೇ ಹಿಂಡಿಗಳನ್ನು ಶೇಕಡ 6 ರಿಂದ 7 ಭಾಗದ ಎಣ್ಣೆ ಪ್ರಮಾಣದ ಗುಣಮಟ್ಟದಲ್ಲಿ ಹಾಗೂ ಕೇಕ್ ಮಾದರಿಯಲ್ಲಿ ಹಿಂಡಿಗಳನ್ನು ಸರಬರಾಜು ಮಾಡಬೇಕು ಇದನ್ನು ಪರೀಕ್ಷೆಗೆ ಒಳಪಡಿಸಿದ ನಂತರ ಹಣ ಪಾವತಿಗೆ ಕ್ರಮ ಜರುಗಿಸಲಾಗುವುದು. ಪ್ರತಿ ಕೆ.ಜಿ.ಗೆ ದರವನ್ನು ಸೂಚಿಸಬೇಕು ಅನ್ವಯವಾಗುವ ಆದಾಯ ತೆರಿಗೆ ಮತ್ತು ಮಾರಾಟ ತೆರಿಗೆಗಳಿಗೆ ಬದ್ಧರಾಗಿರಬೇಕು.
11. ಮಣ್ಣಿನ ಕುಂಡಗಳು ಚೆನ್ನಾಗಿ ಸುಟ್ಟಿರುವ ಈ ಕೆಳಗೆ ಸೂಚಿಸಿದಂತೆ ನಿಖರವಾದ ಅಳತೆಯಲ್ಲಿನ ಕುಂಡಗಳನ್ನು ಮಾತ್ರ ಸರಬರಾಜು ಮಾಡಬೇಕು. ಕುಂಡಗಳನ್ನು ತಯಾರಿಸುವ ಸಂಸ್ಥೆಗಳವರು (Pot Manufacturers) ಮಾತ್ರ ಟೆಂಡರ್‌ಗಳನ್ನು ಈ ಬಗ್ಗೆ ಅಧಿಕೃತ ದಾಖಲೆಗಳನ್ನು ಲಗತ್ತಿಸಬೇಕು ಹಾಗೂ ಯಾವುದೇ ಕಾರಣಕ್ಕೂ ನಿಖರವಾದ ಅಳತೆ ಹಾಗೂ ಗುಣಮಟ್ಟ ಇಲ್ಲದ ಮಣ್ಣಿನ ಕುಂಡಗಳನ್ನು ಸ್ವೀಕರಿಸಲಾಗುವುದಿಲ್ಲ. ಮತ್ತು ಸ್ಥಳದಲ್ಲಿಯೇ ತಿರಸ್ಕರಿಸಲಾಗುವುದು.

| ಕ್ರಮ ಸಂಖ್ಯೆ | ಮಣ್ಣಿನ ಕುಂಡಗಳ ಮಾದರಿ | ಎತ್ತರ (ಅಂಗುಲದಲ್ಲಿ) | ಮೇಲ್ಭಾಗದ ಅಗಲ (ಅಂಗುಲದಲ್ಲಿ) | ತಳಭಾಗದ ಅಗಲ (ಅಂಗುಲದಲ್ಲಿ) |
|---|---|---|---|---|
| 1 | 2 | 3 | 4 | 5 |
| 1. | 6 ಅಂಗುಲದ ಮಣ್ಣಿನ ಕುಂಡಗಳು | 6 | 6 | 4 |
| 2. | 9 ಅಂಗುಲದ ಮಣ್ಣಿನ ಕುಂಡಗಳು | 9 | 9 | 6 |

